KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಫೆಬ್ರವರಿ ೧೮, ೨೦೧೦ (ಮಾಘ ೨೯, ಶಕ ವರ್ಷ ೧೯೩೧) | ಸಂಚಿಕೆ ೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಟಿ.ನರಸೀಪುರ ರೇಷ್ಮೆ ಇಲಾಖೆಗೆ ಸೇರಿದ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ ರೇನಿ/ಗೂಮಾ/ಟಿ.ನರಸೀಪುರ/130/03–04, ದಿನಾಂಕ 14–6–2007, 6–9–2007, 3–12–2007 ಮತ್ತು 29–11–2008.

**2.** ಮುಖ್ಯ ಅಭಿಯಂತರರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರಿಗೆ ಬರೆದ ಪತ್ರ ಸಂಖ್ಯೆ ಕರಾಸಾ/ಕೇಕ/ಕಾಇ/25/2006–07, ದಿನಾಂಕ 3–4–2007.

**ಪ್ರಸ್ತಾವನೆ :**

ಮುಖ್ಯ ಅಭಿಯಂತರರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರು ಟಿ.ನರಸೀಪುರದ ರೇಷ್ಮೆಗೂಡಿನ ಮಾರುಕಟ್ಟೆ ಮುಂಭಾಗದಲ್ಲಿರುವ 2.00 ಎಕರೆ 5 ಗುಂಟೆ ಜಾಗವನ್ನು ಸಾಮಾನ್ಯ ಕನಿಷ್ಟ ಬೆಲೆಯಲ್ಲಿ ಸುಸಜ್ಜಿತ ಬಸ್ ನಿಲ್ದಾಣ ನಿರ್ಮಿಸಲು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ನೀಡುವಂತೆ ಕೋರಿರುವುದಾಗಿ ತಿಳಿಸಿ, ಟಿ.ನರಸೀಪುರದ ರೇಷ್ಮೆಗೂಡು ಮಾರುಕಟ್ಟೆ ವ್ಯಾಪ್ತಿಯಲ್ಲಿ 3.00 ಎಕರೆ 25 ಗುಂಟೆ ಜಮೀನು ಇದ್ದು, ಮಾರುಕಟ್ಟೆಯ ಕಟ್ಟಡ ಹಾಗೂ ಇತರೆ ಕೆಲಸಕ್ಕೆ 1.20 ಎಕರೆ ಜಮೀನು ಬೇಕಾಗಿರುತ್ತದೆ. ಆದ್ದರಿಂದ ಉಳಿದ 2.05 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಬಿಟ್ಟು ಕೊಡಬಹುದು ಎಂದು ಅಭಿಪ್ರಾಯಪಟ್ಟು ಸದರಿ ಟೌನಿನಲ್ಲಿರುವ ಜಮೀನಿನ ಮೌಲ್ಯದ ಬಗ್ಗೆ ತಿಳಿಸಿ, ಜಮೀನನ್ನು ಬಸ್ ನಿಲ್ದಾಣ ನಿರ್ಮಾಣ ಮಾಡಲು ಹಸ್ತಾಂತರಿಸಬಹುದಾಗಿದೆ ಎಂದು ತಿಳಿಸಿ, ಈ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ರೇಷ್ಮೆಗೂಡು ಮಾರುಕಟ್ಟೆ ಟಿ.ನರಸೀಪುರ ರೇಷ್ಮೆ ಇಲಾಖೆಗೆ ಸೇರಿದ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಹಸ್ತಾಂತರಿಸಬಹುದಾಗಿದೆ ಎಂದು ವರದಿ ಮಾಡಿರುವ ಹಿನ್ನೆಲೆಯಲ್ಲಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಟಿ.ನರಸೀಪುರದ ರೇಷ್ಮೆಗೂಡು ಮಾರುಕಟ್ಟೆಯ ವ್ಯಾಪ್ತಿಯಲ್ಲಿರುವ 2.05 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣಕ್ಕಾಗಿ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ವಾಕೈ 23 ರೇಯೋವಿ 2007, ಬೆಂಗಳೂರು, ದಿನಾಂಕ 12–1–2010**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಶಿಪಾರಸ್ಸು ಮಾಡಿರುವಂತೆ ಟಿ.ನರಸೀಪುರದ ರೇಷ್ಮೆಗೂಡು ಮಾರುಕಟ್ಟೆಯ ವ್ಯಾಪ್ತಿಯಲ್ಲಿಯ 3.25 ಎಕರೆ ಜಮೀನಿನಲ್ಲಿ 1.20 ಎಕರೆ ಜಮೀನನ್ನು ರೇಷ್ಮೆ ಇಲಾಖೆಯು ಉಳಿಸಿಕೊಂಡು ಉಳಿದ 2.05 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಬಸ್ ನಿಲ್ದಾಣ ನಿರ್ಮಾಣ ಮಾಡುವುದಕ್ಕಾಗಿ ಜಮೀನಿನ ಮಾರುಕಟ್ಟೆ ಬೆಲೆ ಪಡೆದು ಮತ್ತು ರೇಷ್ಮೆ ಇಲಾಖೆಯು ಉಳಿಸಿಕೊಂಡಿರುವ 1.00 ಎಕರೆ 20

ಗುಂಟೆ ಜಮೀನಿಗೆ ಗೇಟಿನ ಸಮೇತ 8 ಅಡಿ ಎತ್ತರದ ಕಾಂಪೌಂಡ್ ನಿರ್ಮಿಸಿಕೊಡುವ ಷರತ್ತಿನ ಮೇರೆಗೆ ಹಸ್ತಾಂತರಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆರ್‌ಡಿ 52 ಎಲ್‌ಜಿಎಂ 2008, ದಿನಾಂಕ 2–3–2009 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ. ಕಂದಾಯ ಇಲಾಖೆಯು ತಿಳಿಸಿರುವಂತೆ ಸದರಿ ಜಮೀನಿನ ಮಾರುಕಟ್ಟೆ ಬೆಲೆಯು ಈ ಕೆಳಕಂಡಂತಿದೆ.

| ಸ್ಥಳ | ಖುಷ್ಕಿ/ಎಕರೆಗೆ ರೂ.ಗಳಲ್ಲಿ | ತರಿ/ಎಕರೆಗೆ ರೂ.ಗಳಲ್ಲಿ | ಬಾಗಾಯ್ತು/ಎಕರೆಗೆ ರೂ.ಗಳಲ್ಲಿ |
|---|---|---|---|
| ಟಿ.ನರಸೀಪುರ | 20000,00/– | 150000,00/– | 160000,00/– |

| ಸ್ಥಳ | ನಿವೇಶನ ದರ ಚದರಡಿಗೆ ರೂ.ಗಳಲ್ಲಿ | |
|---|---|---|
| ಟಿ.ನರಸೀಪುರ | ವಾಸೋಪಯೋಗಿ | ವಾಣಿಜ್ಯೋಪಯೋಗಿ |
| | 150,00/– | 200.00/– |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.164

**(ಭಾರತಿ ಆರ್. ನಾಯಕ್)**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಉನ್ನತ ಶಿಕ್ಷಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಇಡಿ 191 ಯೋಯೋಕ 2008, ಬೆಂಗಳೂರು, ದಿನಾಂಕ 08ನೇ ಜನವರಿ 2010**

**ವಿಷಯ :** ಕಾರವಾರದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್ ಪ್ರಾರಂಭಿಸುವ ಬಗ್ಗೆ ಹೊರಡಿಸಿದ ಆದೇಶಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ : ಇಡಿ 191 ಯೋಯೋಕ 2008 ದಿನಾಂಕ 26–06–2009

ಸರ್ಕಾರದ ಆದೇಶ ಸಂಖ್ಯೆ : ಇಡಿ 191 ಯೋಯೋಕ 2009 ದಿನಾಂಕ 26–06–2009 ರ ಅನುಬಂಧದ (ಪುಟ 3) ರಲ್ಲಿನ ಸಾಮಾನ್ಯ ಸಿಬ್ಬಂದಿ ವರ್ಗದ ಹುದ್ದೆಗಳ ಒಟ್ಟು ಸಂಖ್ಯೆ 23 (ಇಪ್ಪತ್ತಮೂರು) ಎಂದು ತಪ್ಪಾಗಿ ಮುದ್ರಿತವಾಗಿದ್ದು ಅದನ್ನು 22(ಇಪ್ಪತ್ತೆರಡು) ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.165

**(ಐ.ಎಫ್. ಮಾಗಿ)**

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ, (ಯೋಜನೆ)

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

ಸಂಖ್ಯೆ : ಒಇ 183 ಪೊಸಇ 2009, ಬೆಂಗಳೂರು, ದಿನಾಂಕ 16ನೇ ಜನವರಿ 2010

ಶ್ರೀ ಡಿ. ಮರಿದೇವಯ್ಯ, ನಿವೃತ್ತ ಶಾಖಾಧೀಕ್ಷಕರು ಇವರಿಗೆ ಇವರಿಗಿಂತ ಜ್ಯೇಷ್ಠತೆಯಲ್ಲಿ ಕಿರಿಯರಾದ ಶ್ರೀ ಬಿ. ಮುರಳೀಧರ ಇವರಿಗೆ ಸಹಾಯಕ ಆಡಳಿತಾಧಿಕಾರಿಯಾಗಿ ಬಡ್ತಿ ನೀಡಿದ ದಿನಾಂಕ 05–07–2000 ದಿಂದ ಅನ್ವಯವಾಗುವಂತೆ ಸಹಾಯಕ ಆಡಳಿತಾಧಿಕಾರಿ ಹುದ್ದೆಯಲ್ಲಿ ಪೂರ್ವಾನ್ವಯ ಮುಂಬಡ್ತಿ ನೀಡಲಾಗಿದೆ. ಸದರಿಯವರು ಸೇವೆಯಿಂದ ದಿನಾಂಕ 31–12–2001 ರಂದು ವಯೋ ನಿವೃತ್ತಿ ಹೊಂದಿದ್ದು, ಪೂರ್ವಾನ್ವಯ ಮುಂಬಡ್ತಿಯ ನಂತರದ ಇವರ ವೇತನವನ್ನು ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.ಪಿ.) ನಿಯಮಗಳ ನಿಯಮ (6)ರ ಪ್ರಕಾರ ಸಹಾಯಕ

ಆಡಳಿತಾಧಿಕಾರಿ ವೃಂದದಲ್ಲಿ ಕಾಲ್ಪನಿಕವಾಗಿ (notional) ನಿಗದಿಪಡಿಸಿ ಅದರಂತೆ ಇವರ ಪಿಂಚಣಿಯನ್ನು ಮರು ನಿಗದಿಪಡಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ. ಎನ್. ರವಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ. ಆರ್. 166

**ಒಳಾಡಳಿತ ಸಚಿವಾಲಯ**

**ವಿಷಯ :** ರಾಜ್ಯದ 15 ವಿವಿಧ ನ್ಯಾಯಾಲಗಳಿಗೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರುಗಳ ಹುದ್ದೆಗಳ ಸೃಜನೆ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂ. ಲಾ 108 ಎಲ್‌ಸಿಇ 2003, ದಿನಾಂಕ 23–12–2003
2) ಸರ್ಕಾರದ ಆದೇಶ ಸಂ. ಲಾ 47 ಎಲ್‌ಸಿಇ 2004, ದಿನಾಂಕ 23–06–2005
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ : ಡಿಪಿಎನ್/ಸಿಶಾ 1/108/2009–10, ದಿನಾಂಕ 13–07–2009

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 23–12–2003ರ ಸರ್ಕಾರದ ಆದೇಶದನ್ವಯ ರಾಜ್ಯದಲ್ಲಿ 19 ವಿವಿಧ ನ್ಯಾಯಾಲಯಗಳನ್ನು ಸೃಜಿಸಲಾಗಿದ್ದು, ಅವುಗಳಲ್ಲಿ ಬೆಂಗಳೂರಿಗೆ 8 ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಗಳನ್ನು ಹಾಗೂ ದಾವಣಗೆರೆಗೆ 1 ಮತ್ತು 2ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳನ್ನು ಸೃಜನೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 23–06–2005ರ ಸರ್ಕಾರದ ಆದೇಶದನ್ವಯ ರಾಜ್ಯದಲ್ಲಿ 90 ವಿವಿಧ ದರ್ಜೆಯ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದ್ದು, ಅವುಗಳಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ ಬೆಳಗಾಂ ಮತ್ತು ಮೈಸೂರಿನಲ್ಲಿ ವಿಶೇಷ ನ್ಯಾಯಾಲಯಗಳನ್ನು (ಜಿಲ್ಲಾ ನ್ಯಾಯಾಧೀಶರ ಶ್ರೇಣಿ), ವರದಕ್ಷಣೆ ಸಾವು ಅಪರಾಧ ಪ್ರಕರಣಗಳ ವಿಚಾರಣೆಗಾಗಿ ಬೆಳಗಾಂ ಮತ್ತು ಮೈಸೂರಿನಲ್ಲಿ 2 ವಿಶೇಷ ನ್ಯಾಯಾಲಯಗಳನ್ನು (ಜಿಲ್ಲಾ ನ್ಯಾಯಾಧೀಶರ ಶ್ರೇಣಿ) ಹಾಗೂ ಬಳ್ಳಾರಿಗೆ ಒಂದು ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವನ್ನು ಸೃಜನೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ 13–07–2009ರ ತಮ್ಮ ಪತ್ರದಲ್ಲಿ ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಸೃಜನೆಯಾದ ವಿವಿಧ ದರ್ಜೆಯ ನ್ಯಾಯಾಲಗಳಲ್ಲಿ ಸರ್ಕಾರದ ಪರವಾಗಿ ರಾಜ್ಯವನ್ನು ಪ್ರತಿನಿಧಿಸಿ, ಪ್ರಕರಣಗಳನ್ನು ನಡೆಸಲು 15 ನ್ಯಾಯಾಲಗಳಿಗೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರ ಹಾಗೂ ಪೂರಕ ಸಿಬ್ಬಂದಿಯ ಹುದ್ದೆಗಳನ್ನು ಸೃಜಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 346 ಪಿಪಿಇ 2009, ಬೆಂಗಳೂರು, ದಿನಾಂಕ 16ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಈ ಕೆಳಕಂಡ ತಃಖ್ತೆಯ ಅಂಕಣ (2) ರಲ್ಲಿ ನಮೂದಿಸಿರುವ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಂಕಣ (3) ರಲ್ಲಿ ನಮೂದಿಸಿರುವ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಸೃಜಿಸಿದೆ.

| ಕ್ರ. ಸಂಖ್ಯೆ | ನ್ಯಾಯಾಲಯದ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| (1) | (2) | (3) |
| 1 | 37ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |
| 2 | 38ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |

| | | |
|---|---|---|
| 3 | 39ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |
| 4 | 40ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |
| 5 | 41ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |
| 6 | 42ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |
| 7 | 43ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |
| 8 | 44ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 01 |
| 9 | 4ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಹಿಳೆಯರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ (ವಿಶೇಷ ನ್ಯಾಯಾಲಯ), ಮೈಸೂರು | 01 |
| 10 | 5ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ವರದಕ್ಷಣೆ ಸಾವು ಅಪರಾಧ ಪ್ರಕರಣಗಳ ವಿಚಾರಣೆಗಾಗಿ (ವಿಶೇಷ ನ್ಯಾಯಾಲಯ), ಮೈಸೂರು | 01 |
| 11 | 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ | 01 |
| 12 | 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ | 01 |
| 13 | 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ | 01 |
| 14 | 4ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಹಿಳೆಯರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ (ವಿಶೇಷ ನ್ಯಾಯಾಲಯ), ಬೆಳಗಾವಿ | 01 |
| 15 | 6ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ವರದಕ್ಷಣೆ ಸಾವು ಅಪರಾಧ ಪ್ರಕರಣಗಳ ವಿಚಾರಣೆಗಾಗಿ (ವಿಶೇಷ ನ್ಯಾಯಾಲಯ), ಬೆಳಗಾವಿ | 01 |
| | **ಒಟ್ಟು ಹುದ್ದೆಗಳು** | **15** |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014–ನ್ಯಾಯಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು" ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಎಫ್‌ಡಿ 368 ವೆಚ್ಚ–11/2009, ದಿನಾಂಕ 01–01–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
ಪಿ.ಆರ್. 167 (ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

## INFRASTRUCTURE DEVELOPMENT SECRETARIAT

*Sub :* Participation in the conference of Chief Secretaries on PPP in infrastructure to be held on 2-2-2010 at Vigyan Bhavan, New Delhi.

*Read :* D.O. Letter No. 14011/6/2009-Infra, dated 26-11-09 from the Advisor to Deputy Chairman, Planning Commission, New Delhi.

Preamble :

In the letter dated 3-11-09 read at above the Advisor to the Deputy Chairman, Planning Commission, Government of India, New Delhi has informed that the meeting scheduled to be held on 15-12-09 is being postponed to 2-2-2010. Therefore he has requested the State Government to participation in the conference of Chief Secretaries on Public Private Partnership (PPP) to be held on 2-2-2010 at Vigyan Bhavan, New Delhi.

2. Hence this order

**Government order No. IDD 112 IDM 2009, Bangalore, Dated 18-01-2010**

Government is pleased to accord permission to the following officers of the Government of Karnataka to participate in the conference of Chief Secretaries on Public Private Partnership (PPP) to be held on 2-2-2010 at Vigyan Bhavan, New Delhi.

1. ACS & Principal Secretary to Govt., Finance Dept.,
2. Principal Secretary to Govt., Education Dept.,
3. Principal Secretary to Govt., Urban Dev. Dept.,
4. Principal Secretary to Govt., Planning Dept.,
5. Principal Secretary to Govt., Infrastructure Dev. Dept.,
6. Principal Secretary to Govt., PWD
7. The Secretary to Govt., (B & R) Finance Dept.,

2. The Officers are eligible to draw TA/DA as per rules.

By order and in the name of the Governor of Karnataka

(**R. Shivalingaiah)**

Under Secretary to Government,

P.R. 168 Infrastructure Development Department

## INFRASTRUCTURE DEVELOPMENT SECRETARIAT

*Sub :* Release of Government of Karnataka's 50% balance share of the cost escalation towards Sholapur-Gadag Railway Guage conversion project.

*Read :* 1. G.O.No. IDD 1 NSW 2003, dated 03-03-2003
*2.* G.O.No. IDD 1 NSW 2003, dated 29-03-2003
*3.* G.O.No. IDD 40 NSW 2003, dated 16-09-2003
*4.* G.O.No. IDD 95 NSW 2003, dated 22-01-2004
*5.* G.O.No. IDD 42 NSW 2004, dated 16-06-2004
*6.* G.O.No. IDD 21 NSW 2005, dated 22-02-2005
*7.* G.O.No. IDD 21 NSW 2005, dated 29-03-2005
*8.* G.O.No. IDD 42 NSW 2004 (P) dated 22-07-2005
*9.* G.O.No. IDD 42 NSW 2004 (P) dated 15-10-2005
*10.* G.O.No. IDD 63 IDM 2005, dated 28-03-2006
*11.* G.O.No. IDD 42 NSW 2004, dated 25-10-2006
*12.* G.O.No. IDD 42 NSW 2004, dated 26-05-2007
*13.* G.O.No. IDD 91 NSW 2007, dated 23-03-2009
*14.* G.O.No. IDD 91 NSW 2007, dated 31-03-2009
*15.* Letter No. K-RIDE/Project/11/Solapur-Gadag/2007/10, dated 17-9-09 of CEO, K-RIDE, Bangalore

Preamble :

In the Government Orders read at Sl. No. (1) to (14) above Government of Karnataka have released their agreed 50% share of balance cost towards Sholapur-Gadag railway gauge conversion project amounting to Rs. 157.36 crore.

2. The Chief Executive Officer, K-RIDE, Bangalore in his letter read at Sl. No. (15) above, has furnished the details of expenditure incurred for the various cost sharing projects and the amount to be deposited by Government of Karnataka, According to this balance amount to be released by Government of Karnataka for completion of Sholapur-Gadag guage conversion project is Rs. 166.00 crores. Total amount so for released by the Government of Karnataka for this project is Rs. 157.36 crore. Now the Government has decided to release the balance amount of Rs. 6.5 crore towards Solapur-Gadag Railway Gauge Conversion project out of the budget provided during 2009-10.

3. Hence this Order

Government Order No. IDD 91 NSW 2007, Bangalore, Dated 18-01-2010

After careful examination of the above, Government is pleased to accord sanction for release an amount of Rs. 6.5 crore (Rupees Six crore fifty lakhs only) towards Sholapur-Gadag Guage Conversion railway project from the Head of Account "5465-01-190-3-03 (P) Solapur-Gadag Gauge Conversion Project-211-Investments.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore

3.This Order is issued in accordance with the concurrence of Finance Department given vide U.O. Note No. FD 1808 Exp. 1/2009, dated 21-12-2009.

By Order and in the name of the Governor of Karnataka

(**N. Manjula Geetha)**

Under Secretary to Government,

P.R. 169 Infrastructure Development Department

## INFRASTRUCTURE DEVELOPMENT SECRETARIAT

*Sub :* Release of funds towards cost sharing Railway project Kotturu-Harihar new broad gauge Railway Line project.

*Read :* 1. G.O.No. IDD 1 NSW 2002, dated 22-03-2002
*2.* G.O.No. IDD 47 NSW 2003 (P) dated 26-03-2004
*3.* G.O.No. IDD 51 NSW 2004, dated 19-07-2004
*4.* G.O.No. IDD 98 NSW 2003, dated 21-10-2006
*5.* G.O.No. IDD 98 NSW 2003, dated 20-12-2006
*6.* G.O.No. IDD 98 NSW 2003, dated 05-09-2007
*7.* G.O.No. IDD 15 NSW 2008, dated 22-10-2008
*8.* G.O.No. IDD 15 NSW 2008, dated 17-12-2008
*9.* G.O.No. IDD 15 NSW 2008, dated 20-01-2009
*10.* G.O.No. IDD 15 NSW 2008, dated 04-08-2009
11. Letter No. W.63/B/CN/BNC/Genl., dated 19-11-2009 Of Chief Engineer, (Con.,) SWR, Bangalore.

Preamble :

In the Government Orders referred to at Sl. No. (1) to (10) above Government of Karnataka has so far released an amount of Rs. 154.57 crore towards cost sharing for Kotturu-Harihar New railway line project.

2. The Chief Engineer, South Western Railway, Bangalore in his letter read at Sl. No. (11) above, has stated that the railways had already spent Rs. 250.48 crore towards Kotturu-Harihar new railway line project and requested for immediate deposit balance of Rs. 32.79 crore i.e. 2/3 share of Government of Karnataka.

3. The proposal of Railways has been examined and it has been decided to release an amount of Rs. 15.00 crore out of the Budget of Rs. 100.00 crore provided under the Head of Account "5465-01-190-3-05" (Plan) 211 investment towards cost sharing for new railway projects during 2009-2010. Hence this order

Government order No. IDD 15 NSW 2008, Bangalore, Dated 13-01-2010

After careful examination of the request of Railways, Government is pleased to release Rs. 15.00 crore (Rupees Fifteen Crore only) towards Kotturu-Harihar new railway line being the part of the balance 2/3rd share of Government of Karnataka. The above amount shall be met under the Head of Account "5465-01-190-3-05" (Plan) 211 investment out of the budget provision Rs. 100.00 crore, towards cost sharing for new railway projects during 2009-10.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government Infrastructure Development Department and K-RIDE shall in turn deposit the same with the Financial Advisor and Chief Accounts Officers (Construction), South Western Railway, Bangalore.

3. This order is issued in accordance with the concurrence of Finance Department given vide U.O. Note No.FD 2047 Exp-1/09, dated 24-12-2009.

By Order and in the name of the Governor of Karnataka

(**R. Shivalingaiah)**

Under Secretary to Government,

P.R. 170 Infrastructure Development Department

## ಇಂಧನ ಸಚಿವಾಲಯ

**ವಿಷಯ :** ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 205 ಎನ್‌ಸಿಇ 2001, ದಿನಾಂಕ 25–1–2002.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 262 ಎನ್‌ಸಿಇ 2006, ದಿನಾಂಕ 26–10–2006.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಎಸ್‌ಹೆಚ್‌ಪಿ/08/2029, ದಿನಾಂಕ 2/3–12–2008.
4. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ : ಇಎನ್ 514 ಎನ್‌ಸಿಇ 2008, ದಿನಾಂಕ 27–12–2008.
5. ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರ ಪತ್ರಗಳ ದಿನಾಂಕ : 5–1–2009 ಮತ್ತು 14–7–2009.
6. ಸರ್ಕಾರಿ ಪತ್ರ ಸಂಖ್ಯೆ : ಇಎನ್ 514 ಎನ್‌ಸಿಇ 2008, ದಿನಾಂಕ : 18/19–8–2009.
7. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಕೊಡಿಗೆಹಳ್ಳಿ/09/3649, ದಿನಾಂಕ 6/7–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಮುಸಾಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಟಿ.ನರಸೀಪುರ ತಾಲ್ಲೂಕಿನ ಕೊಡಗಿಹಳ್ಳಿ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ವರ್ಗಾವಣೆ ಮಾಡಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು 5 ವರ್ಷಕ್ಕೆ ಮೇಲ್ಪಟ್ಟ ಯಾವುದೇ ಪ್ರಗತಿ ಸಾಧಿಸದ ಕಂಪನಿಗಳ ಪಟ್ಟಿಯನ್ನು ಕಳುಹಿಸುತ್ತಾ, ಸದರಿ ಕಂಪನಿಗಳ ಹಂಚಿಕೆ ಆದೇಶವನ್ನು ರದ್ದುಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪಟ್ಟಿಯಲ್ಲಿ ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಲಿಮಿಟೆಡ್ ಕಂಪನಿ ಒಂದಾಗಿರುತ್ತದೆ.

ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಲಿಮಿಟೆಡ್ ಇವರ 1.5 ಮೆ.ಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಲಾಗಿತ್ತು.

ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ 5–1–2009ರ ಪತ್ರದಲ್ಲಿ ಸದರಿ ನೋಟೀಸಿಗೆ ಉತ್ತರವನ್ನು ಸಲ್ಲಿಸಿರುತ್ತಾರೆ ಹಾಗೂ ದಿನಾಂಕ 14–7–2009ರ ಪತ್ರದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸುವಂತೆ ಕೋರಿರುತ್ತಾರೆ.

ಸದರಿ ಪತ್ರಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ (6)ರ ಸರ್ಕಾರಿ ಪತ್ರದೊಂದಿಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರಿಗೆ ಕಳುಹಿಸಿ ಸ್ಪಷ್ಟ ಅಭಿಪ್ರಾಯದೊಂದಿಗೆ ವರದಿಯನ್ನು ನೀಡುವಂತೆ ಕೋರಲಾಗಿತ್ತು.

ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರು ವಿವರವಾದ ಯೋಜನಾ ವರದಿಯನ್ನು ತಯಾರಿಸಿರುವುದಿಲ್ಲವೆಂದು ದಿನಾಂಕ 5-1-2009ರ ಪತ್ರದಲ್ಲಿ ತಿಳಿಸಿರುತ್ತಾರೆ. ಸದರಿ ಕಂಪನಿಗೆ ಕಿರು ಜಲ ವಿದ್ಯುತ್ ಯೋಜನೆಯು ವರ್ಗಾವಣೆಗೊಂಡು 3 ವರ್ಷ ಕಳೆದರೂ ಏನು ಪ್ರಗತಿ ಸಾಧಿಸಿರುವುದಿಲ್ಲ. ಸರ್ಕಾರವು ದಿನಾಂಕ 26-10-2006ರ ಆದೇಶದಲ್ಲಿ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ ಎಂದು ತಿಳಿಸಿದೆ. ಆದುದರಿಂದ ಕಂಪನಿಗೆ ಯೋಜನೆಯನ್ನು ಅನುಷ್ಠಾನಗೊಳಿಸಲು ನೀಡಿರುವ ಸಮಯಾವಕಾಶವು ಮುಗಿದಿರುತ್ತದೆ. ಆದರೂ ಸಹ ಏನು ಪ್ರಗತಿಯನ್ನು ಸಾಧಿಸಲಾಗಿಲ್ಲ. ಶಾಸನಬದ್ಧ ಅನುಮತಿಗಳನ್ನು ಪಡೆಯಲಾಗಿಲ್ಲ. ಆದುದರಿಂದ ಸದರಿ ಕಂಪನಿಗೆ ವರ್ಗಾವಣೆಗೊಂಡಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಅಭಿಪ್ರಾಯ ನೀಡಿರುತ್ತಾರೆ.

ಸದರಿ ಪ್ರಸ್ತಾವನೆವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಖ್ಯೆ ಇಎನ್ 514 ಎನ್‌ಸಿಇ 2008, ಬೆಂಗಳೂರು, ದಿನಾಂಕ: 5ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ ಡಿಇ 205 ಎನ್‌ಸಿಇ 2001 ದಿನಾಂಕ 25-1-2002 ಹಾಗೂ ಆದೇಶ ಸಂಖ್ಯೆ ಇಎನ್ 262 ಎನ್‌ಸಿಇ 2006 ದಿನಾಂಕ 26-10-2006ರಲ್ಲಿ ಮೆ॥ ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಮೈಸೂರು ಜಿಲ್ಲೆಯ ಟಿ.ನರಸೀಪುರ ತಾಲ್ಲೂಕಿನ ಕೊಡಗಿಹಳ್ಳಿ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಗೆ ಸಂಬಂಧಿಸಿದ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಜಿ. ಸಂಪತ್ ಕುಮಾರ್)**

ಪಿ.ಆರ್.92 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

## ಇಂಧನ ಸಚಿವಾಲಯ

## ಸೇರ್ಪಡೆ

**ಸಂಖ್ಯೆ: ಇಎನ್ 220 ಎನ್‌ಸಿಇ 2007, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2009.**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 220 ಎನ್‌ಸಿಇ 2007, ದಿನಾಂಕ 19-5-2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು:-

``Weir - **Longitude**: 15$^0$50'10'' **N Latitude**: 75$^0$50'10''E

Power House - **Longitude**: 15$^0$50'10'' **N Latitude**: 75$^0$05'35''E

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಜಿ. ಸಂಪತ್ ಕುಮಾರ್)**

ಪಿ.ಆರ್.93 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಸಾಗರ ಪವರ್ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಪಟ್ಟದಹಳ್ಳ/2007/1934, ದಿನಾಂಕ 23/30-8-2007.

**2.** ದಿನಾಂಕ 13-2-2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಸಾಗರ ಪವರ್ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಶಿರಸಿ

ತಾಲ್ಲೂಕು ನರಸ್ಕಲ್ ಗ್ರಾಮದ ಬಳಿ ಪಟ್ಟದಹಳ್ಳಕ್ಕೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 13–2–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಸಾಗರ ಪವರ್ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 304 ಎನ್‌ಸಿಇ 2007, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2009**.

ಮೆ॥ ಸಾಗರ ಪವರ್ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕು ನರಸ್ಕಲ್ ಗ್ರಾಮದ ಬಳಿ ಪಟ್ಟದಹಳ್ಳಕ್ಕೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು, ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ ಜೀವಿಸಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದು.

4. ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು

ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೊಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತಾರೆ.
11. ಸದರಿ ಆದೇಶವನ್ನೆ ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್ ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
13. Subject to the risk of submersion in the event of KPCL project.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಜಿ. ಸಂಪತ್ ಕುಮಾರ್)**

ಪಿ.ಆರ್.94

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## COMMERCE & INDUSTRIES SECRETARIAT

**Notification** No. CI 60 SGF 2007, Bangalore, Dated 5th January 2010

Whereas it is necessary to make an order with a view to enabling Gokak Sugars Ltd., (Soubhagya Laxmi Sugars Private Limited) at Hirenandhi Village, Gokak Taluk, Belgaum District, to purchase the quantity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of Sugar.

Now, therefore, in exercise of the powers conferred by clause 6,7,8 and 9 of the Sugarcane (Control) Order 1966 read with CSR 1127, dated 16th July 1966 of the Government of India in the Ministry of Food, Agriculture, Community Development and Co-operation (Department of Food) the Government of Karnataka Hereby makes the following orders namely :-

**1. TITLE, COMMENCEMENT AND DURATION OF OPERATION :**

i) This order may be called the Karnataka Sugarcane (Regulation of Distribution) Gokak Sugars Ltd., (Soubhagya Laxmi Sugars Private Limited) at Hirenandhi Village, Gokak Taluk, Belgaum District, Order 2009.

ii) It shall come into force at once and shall remain in force till withdraw or repealed subject to amendments as the State Government may make from time to time.

**2. DEFINITIONS :-** In this Order

a) Factory means the premises of the factory at Hirenandhi Village, owned by Gokak Sugars Ltd., (Soubhagya Laxmi Sugars Private Limited), Hirenandhi Village, Gokak Taluk, Belgaum District, including the premises of such factory.

b) 'Form' means a form appended to this Order

c) Words and expressions used in this order but not defined shall have the meaning assigned to them in clause 2 of the Sugarcane (Control) Order 1966.

**3. DETERMINATION OF THE QUANTITY OF SUGARCANE REQUIRED BY THE FACTORY AND RESERVATION OF THE AREA FOR SUPPLY OF SUGARCANE.**

i) The crushing capacity of Gokak Sugars Ltd., (Soubhaya Laxmi Sugars Private Limited) being 2500 TCD. The quantity of Sugarcane required by the factory during a year is about 4.50 Lakhs M.Ts to 5.00 Lakh M.Ts.

ii) The factory shall secure the Sugarcane determined under sub clause (2) from the areas specified in schedule-I to this order which shall be the area reserved temporarily in the interest of farmers for supplying Sugarcane to the factory concerned, till the new factories, likely to come up in that area are established.

**4. FIXATION OF QUANTITY OF SUGARCANE TO BE SUPPLIED BY THE GROWER :-**

Every grower of Sugarcane in the area reserved temporarily as specified in Schedule-I shall supply to the factory ninety five percent of the Sugarcane grown by each such grower Co-operative Society operating in the reserved area, through such society

**5. AGREEMENT TO SUPPLY OR PURCHASE THE DETERMINED QUANTITY OF SUGARCANE**

Every grower of Sugarcane or a Sugarcane grower Co-operative Society, supplying Sugarcane to the factory and the factory shall enter into agreement to supply or purchase as the case may be, the quantity of Sugarcane determined under clause-4.

**6. PROHIBITION OF EXPORT OF SUGARCANE FROM AREA RESERVED TEMPORARILY**

No Sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. ISSUE OF PERMITS :-**

i) Application for the grant of a permit under clause-6 shall be made in form 2 of Schedule-II and shall be accompanied by a fee of Rs. 5/- and an amount of Rs. 100/- as security Deposit.

ii) If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part thereof may not be forfeited, pass order forfeiting the whole or part of the amount deposited as security.

By Order and in the name of the Governor of Karnataka

**P. Ananda Kumar**

Desk Officer (Sugar)

Commerce & Industries Department

**SCHEDULE-I**

Following 9 Villages of Gokak Taluk of Belgaum District are allocated temporarily to Gokak Sugars Ltd., (Soubhagya Laxmi Sugars Private Limited), Hirenandhi Village, Gokak Taluk, Belgaum District, for supply of Sugarcane.

| **Gokak Taluk** | |
|---|---|
| 1) | Mamadapur |
| 2) | Betageri |
| 3) | Kaparatti |
| 4) | Mannikeri |
| 5) | Gosbala |
| 6) | Chikkanandi |
| 7) | Hirenandi |
| 8) | Hosur |
| 9) | Bagarnal |

CI 60 SGF 2007

**(P. Anandakumar)**

Desk Officer (Sugar)

Commerce & Industries Department

**SCHEDULE-II-FORM-I**

*(See Clause 6)*

The Karnataka Sugarcane (Regulation of Distribution), Gokak Sugars Ltd., (Soubhagya Laxmi Sugars Private Limited), Hirenandhi Village, Gokak Taluk, Belgaum District Order 2009.

Permit No. : Date :

1. Full Name of the permit holder :
2. Father's Name :

3. Residential Address in full :
4. Quantity of Sugarcane for which :
   Permit is granted for export
5. Area and village from which :
   Sugarcane is permitted to be
   Exported.
6. A. Place to which it is to be exported :
   B. The purpose for which export
   is permitted.
   i) For Sale
   ii) For crushing sugar cane juice for :
   Manufacture of Gur/Sakkare Gul/
   Jaggery Rabi or Khandasari.
7. Their permit is valid up to :
8. The permit is granted subject to the :
   Following terms & conditions.
   a) Permit is not transferable.
   b) The permit shall be produced on demand by an officer authorized by the Deputy Commissioner.
   c) On expiry of the validity of the permission within 48 hours of the expiry of the validity date the permit shall be surrendered to the permit issuing authority.

*Place* *Signature of the Permit issuing Authority*

*Date*

**SCHEDULE-II-FORM-II**

*(See Clause 7)*

The Karnataka Sugarcane (Regulation of Distribution), Gokak Sugars Ltd., (Soubhagya Laxmi Sugars Private Limited), Hirenandhi Village, Gokak Taluk, Belgaum Disrict Order 2009. Application for the grant of permit for exporting Sugarcane from a reserved area.

1. Full Name of the Applicant :
2. Father's Name :
3. Residential Address in full :
4. Quantity of Sugarcane for which :
   Permit is requested for export
5. Area and village from which :
   Sugarcane is intended to be
   Exported.

6. The purpose for which export is intended
   i) For Sale
   ii) For crushing Sugarcane Juice or Manufacture of Gur/Sakkare Gul/ Jaggery Rabi/or Khandasari for sale or self consumption :

I declare that, I am fully aware of the provisions of the Karnataka Sugarcane (Regulation of Distribution), Gokak Sugars Ltd.,(Soubhagya Laxmi Sugars Private Limited), Hirenandhi Village, Gokak Taluk, Belgaum District, Order 2009 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read got read and understood the conditions of the permit given in Form No. 1 of the Schedule appended to the Karnataka Sugarcane (Regulation of Disribution), Gokak Sugars Ltd., (Soubhagya Laxmi Sugars Private Limited), Hirenandhi Village, Gokak Taluk, Belgaum District Order 2009 and I agree to abide by them.

*Place* *Signature of the Applicant*

*Date*
*PR No. 125*

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಕೆ. ರಾಮೇಗೌಡ ನೋಟರಿ, ಬೆಂಗಳೂರು ಇವರ ವಿರುದ್ಧ ಪಾಸ್‌ಪೋರ್ಟ್ ಕಛೇರಿಯಿಂದ ಸ್ವೀಕೃತವಾದ ದೂರಿಗೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯದ ಆದೇಶ ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂ. ಲಾ 128 ಎಲ್‌ಸಿಎಲ್ 08, ದಿನಾಂಕ 29–01–09
2) ಉಚ್ಚ ನ್ಯಾಯಾಲಯದ ರಿ.ಪಿ.ನಂ. 3713/09 (ಎಸ್.ಆರ್.ಇ.ಎಸ್.) ದಿನಾಂಕ 8–6–09

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 29–1–09ರ ಆದೇಶದಲ್ಲಿ ಶ್ರೀ ಕೆ. ರಾಮೇಗೌಡ, ನೋಟರಿ, ಬೆಂಗಳೂರು ಇವರು ಅರ್ಜಿದಾರರ ಸಹಿ ಇಲ್ಲದೇ ಅಫಿಡವಿಟನ್ನು ಶಪಥೀಕರಿಸಿರುವುದರ ಬಗ್ಗೆ ಪಾಸ್‌ಪೋರ್ಟ್ ಕಛೇರಿಯಿಂದ ಬಂದ ದೂರನ್ನು ಗಂಭೀರವಾಗಿ ಪರಿಗಣಿಸಿ ನಿಯಮಾನುಸಾರ ಶ್ರೀಯುತರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿತ್ತು. ಈ ಬಗ್ಗೆ ಶ್ರೀಯುತರು ಉಚ್ಚ ನ್ಯಾಯಾಲಯದಲ್ಲಿ ರಿ.ಪಿ. 3713/09ರಲ್ಲಿ ಸರ್ಕಾರವು ದಿನಾಂಕ 29–1–09ರ ಆದೇಶದಲ್ಲಿ ಗುರುತರ ದಂಡನೆ ವಿಧಿಸಿರುವುದನ್ನು ಪ್ರಶ್ನಿಸಿದ್ದರು.

ಉಚ್ಚ ನ್ಯಾಯಾಲಯವು ಮೇಲೆ (2)ರಲ್ಲಿ ಓದಲಾದ ದಿನಾಂಕ 08–06–09ರ ಆದೇಶದಲ್ಲಿ ಅರ್ಜಿದಾರರ ಸುದೀರ್ಘ ಸೇವಾ ಅವಧಿಯಲ್ಲಿ ಈಗಿನ ತಪ್ಪು ಹೊರತು ಬೇರೆ ಅಪಾದನೆಗಳಿಲ್ಲದೆ, ಅವರ ವಯಸ್ಸು 72 ಮತ್ತು ನಡತೆ ಪರಿಗಣಿಸಿ ಅವರಿಂದ ಆದ ಪ್ರಮಾದ ಅಷ್ಟೊಂದು ದೊಡ್ಡ ಪ್ರಮಾಣದ್ದಾಗಿಲ್ಲದಿರುವುದರಿಂದ ವಿಧಿಸಲಾಗಿರುವ ದಂಡನೆ ಸಮಪ್ರಮಾಣದಲ್ಲಿಲ್ಲ ಮತ್ತು ಅಫಿಡವಿಟ್‌ನಲ್ಲಿ ಡಿಪೋನೆಂಟ್ ಸಹಿ ಮಾಡಿದ್ದು ಅದು ಎಡಭಾಗದಲ್ಲಿದ್ದು, ನೋಟರಿಯವರು ಆಗಿರುವ ತಪ್ಪನ್ನು ಒಪ್ಪಿಕೊಂಡು ಇನ್ನು ಮುಂದೆ ಈ ರೀತಿಯಾಗದಂತೆ ಎಚ್ಚರ ವಹಿಸುತ್ತೇನೆಂದಿರುವುದನ್ನು ಒಪ್ಪಿ ಎಚ್ಚರಿಕೆ ನೀಡಬಹುದಿತ್ತೆಂದು ಹಾಗೂ ಅವರ ದುರ್ನಡತೆ ಗುರುತರವಾದ ಸ್ವರೂಪದ್ದಲ್ಲವಾದ್ದರಿಂದ ದಿನಾಂಕ 29–01–09ರ ಸರ್ಕಾರದ ಆದೇಶವನ್ನು ರದ್ದುಗೊಳಿಸಿದೆ ಮತ್ತು ನೋಟರಿ ಕರ್ತವ್ಯದಲ್ಲಿ ಇನ್ನು ಮುಂದೆ ತಪ್ಪುಗಳನ್ನು ಮಾಡಬಾರದೆಂಬ ಎಚ್ಚರಿಕೆ ನೀಡಿದೆ.

ಉಚ್ಚ ನ್ಯಾಯಾಲಯದ ಆದೇಶ ಹಾಗೂ ವಿಷಯವನ್ನು ಸರ್ಕಾರದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 128 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ 14–12–2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಕೆ. ರಾಮೇಗೌಡ, ನೋಟರಿ, ಬೆಂಗಳೂರು ಇವರಿಗೆ ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(iii) ರನ್ವಯ ಇನ್ನು ಮುಂದೆ ಇಂತಹ ತಪ್ಪುಗಳು ಪುನರಾವರ್ತನೆಯಾಗದಂತೆ ನೋಡಿಕೊಳ್ಳುವಂತೆ ಸೂಚಿಸಿ ಪ್ರಕರಣ ಮುಕ್ತಾಯಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.126

**ಶಕುಂತಲಾ ಹೆಚ್. ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಕಾರ್ಮಿಕ ಸಚಿವಾಲಯ**

**ವಿಷಯ :** ಶ್ರೀ ವೆಂಕೋಬ ರಾವ್, ನಿವೃತ್ತ ಉಪ ಕಾರ್ಮಿಕ ಆಯುಕ್ತರು, ಇವರ ಮರು ನೇಮಕಾತಿ ಸೇವೆಯನ್ನು ಸಂಬಳ ಮತ್ತು ಪಿಂಚಣಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 490 ಎಂಎಸ್‌ಓ 83, ದಿನಾಂಕ 20–02–1984
2) ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 363 ಎಂಎಸ್‌ಓ 85, ದಿನಾಂಕ 25–06–1985
3) ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 584 ಎಂಎಸ್‌ಓ 86, ದಿನಾಂಕ 03–03–1987
4) ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 18 ಎಸ್‌ಡಿಇ 84, ದಿನಾಂಕ 24–08–1984
5) ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 18 ಎಸ್‌ಡಿಇ 84, ದಿನಾಂಕ 31–12–1984
6) ಕೆ.ಎ.ಟಿ. ಆದೇಶ ದಿನಾಂಕ 25–07–2008 ಅರ್ಜಿ ಸಂಖ್ಯೆ : 210/2005 ಮತ್ತು 7016/2005

**ಪ್ರಸ್ತಾವನೆ :**

ಕಾರ್ಮಿಕ ಇಲಾಖೆಯಲ್ಲಿ ಉಪ ಕಾರ್ಮಿಕ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ವೆಂಕೋಬರಾವ್ ಇವರನ್ನು ಆಗಿನ ಕಾನೂನು ಸಚಿವರ ಆಪ್ತ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಲಾಗಿತ್ತು. ಮಾನ್ಯ ಸಚಿವರ ಆಪ್ತ ಕಾರ್ಯದರ್ಶಿಯಾಗಿದ್ದಾಗಲೇ ದಿನಾಂಕ 31–05–1984ರಂದು 55 ವರ್ಷ ತುಂಬಿದ್ದರಿಂದ ಸೇವೆಯಿಂದ ನಿವೃತ್ತರಾಗಿದ್ದರು. ತದನಂತರ ದಿನಾಂಕ 01–06–1984ರಿಂದ ಪುನಃ ಗುತ್ತಿಗೆ ಆಧಾರದ ಮೇಲೆ ಸರ್ಕಾರದ ಅಧಿಸೂಚನೆ ಸಂಖ್ಯೆ : DPAR 121 SGO 84, ದಿನಾಂಕ 12–06–84ರಲ್ಲಿ ಮಾನ್ಯ ಕಾನೂನು ಸಚಿವರ ಆಪ್ತ ಕಾರ್ಯದರ್ಶಿಯವರಾಗಿ ನೇಮಕಗೊಂಡು ದಿನಾಂಕ 28–04–89ರವರೆಗೂ ಸೇವೆ ಸಲ್ಲಿಸಿರುತ್ತಾರೆ.

ಸರ್ಕಾರದ ಆದೇಶ ಸಂಖ್ಯೆ : DPAR 18 SDE 84, ದಿನಾಂಕ : 24–08–1984ರಲ್ಲಿ ಸರ್ಕಾರವು ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು 55 ರಿಂದ 58ಕ್ಕೆ ಏರಿಸಿದೆ. ತದನಂತರ ಸರ್ಕಾರವು ಆದೇಶ ಸಂಖ್ಯೆ : DPAR 18 SDE 84 ದಿನಾಂಕ 17–09–1984 ಆದೇಶದ ಮೂಲಕ ಈ ಕೆಳಗಿನ ಮೂರು ನಿಬಂಧನೆಗಳನ್ನು ಪೂರೈಸುವವರ ಸೇವೆಯನ್ನು 58 ವರ್ಷಗಳ ತನಕ ಮುಂದುವರೆಸಲು ಆದೇಶ ಹೊರಡಿಸಿದೆ.

1) 55 ವರ್ಷ ವಯಸ್ಸನ್ನು ಹೊಂದಿ ದಿನಾಂಕ 1–8–1984ರಂದು ಅಥವಾ ಅದಕ್ಕೂ ಮುನ್ನ ಸೇವೆಯಿಂದ ನಿವೃತ್ತ ಹೊಂದಿರತಕ್ಕದ್ದು.
2) ಸೇವೆಯಲ್ಲಿ ಯಾವುದೇ ಛಿದ್ರತೆ ಇಲ್ಲದಂತೆ ನಿವೃತ್ತಿ ಹೊಂದಿದ ತಕ್ಷಣವೇ ಪುನರ್ ನೇಮಕಾತಿ ಅಥವಾ ಒಪ್ಪಂದದ ನೇಮಕಾತಿ ಮೇರೆಗೆ ಮುಂದುವರೆಯತಕ್ಕದ್ದು.
3) ದಿನಾಂಕ 02–08–1984ರಂದು ಸೇವೆಯಲ್ಲಿ ಇರತಕ್ಕದ್ದು

ಸದರಿ ಆದೇಶದಂತೆ ತಮ್ಮ ಸೇವೆಯನ್ನು 58 ವರ್ಷಗಳವರೆಗೆ ಮುಂದುವರೆಸಿ ನಿವೃತ್ತಿ ವೇತನವನ್ನು ನೀಡುವಂತೆ ಶ್ರೀ ಸೋಮೇಶ್ವರ್ ಹಾಗೂ ಶ್ರೀ ವಾಸುದೇವ ಮಯ್ಯ ಎಂಬುವವರು ಕೆ.ಎ.ಟಿ.ಗೆ ಅರ್ಜಿ ಸಂಖ್ಯೆ : 2382/87ನ್ನು ಸಲ್ಲಿಸಿದ್ದರು. ಈ ಅರ್ಜಿಯ ತೀರ್ಪಿನ ವಿರುದ್ಧ ಸರ್ಕಾರವು ಅಪೀಲನ್ನು ಸಲ್ಲಿಸಿತು. ಈ ಅಪೀಲಿನ ತೀರ್ಪಿನ ವಿರುದ್ಧ ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಸಿವಿಲ್ ಅರ್ಜಿ ಸಂಖ್ಯೆ : 1248–1261/98ನ್ನು ಸಲ್ಲಿಸಲಾಗಿತ್ತು. ಇದರಲ್ಲಿ ಶ್ರೀ ಸೋಮೇಶ್ವರ್ ಹಾಗೂ ಶ್ರೀ ವಾಸುದೇವ ಮಯ್ಯ ಇವರಿಗೆ 58 ವರ್ಷಗಳಾಗುವ ತನಕದ ಅವಧಿಯನ್ನು ಸೇವೆಗೆ ಪರಿಗಣಿಸಿ ನೀಡುವಂತೆ ಮಾನ್ಯ ನ್ಯಾಯಾಲಯವು ಆದೇಶವನ್ನು ನೀಡಿದೆ. ಅದರಂತೆ, ಸದರಿಯವರಿಗೆ ನಿವೃತ್ತಿ ಸೌಲಭ್ಯವನ್ನು ನೀಡಲಾಗಿದೆ. ಇದೇ ಸೌಲಭ್ಯವನ್ನು ತಮಗೂ ನೀಡುವಂತೆ ಶ್ರೀ ವೆಂಕೋಬರಾವ್‌ರವರು ಸಹ ಅರ್ಜಿಯನ್ನು ಸಲ್ಲಿಸಿದ್ದು, ಆ ಸಂದರ್ಭದಲ್ಲಿ ಆರ್ಥಿಕ ಇಲಾಖೆಯು ನ್ಯಾಯಾಲಯದಲ್ಲಿ ಆದೇಶ ಪಡೆದ ಅರ್ಜಿದಾರರಿಗೆ ಸಂಬಂಧಿಸಿದಂತೆ ಮಾತ್ರ ನ್ಯಾಯಾಲಯದ

ತೀರ್ಮಾನವನ್ನು ಅನುಷ್ಠಾನಗೊಳಿಸಲು ತೀರ್ಮಾನಿಸಿದೆ ಎಂದು, ಆದ್ದರಿಂದ ಈ ಸೌಲಭ್ಯವನ್ನು ಶ್ರೀ ವೆಂಕೋಬರಾವ್‌ರವರಿಗೆ ಪರಿಗಣಿಸಲು ಸಾಧ್ಯವಿಲ್ಲವೆಂದು ಅಭಿಪ್ರಾಯ ನೀಡಿದೆ. ಆ ಪ್ರಕಾರ ಶ್ರೀ ವೆಂಕೋಬರಾವ್ ರವರ ಮನವಿಯನ್ನು ನಿರಾಕರಿಸಲಾಗಿತ್ತು.

ಶ್ರೀ ವೆಂಕೋಬರಾವ್‌ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ : 7016/05ನ್ನು ಸಲ್ಲಿಸಿದ್ದು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ 25-07-2008ರ ತೀರ್ಪಿನಲ್ಲಿ ಶ್ರೀ ವೆಂಕೋಬರಾವ್‌ರವರ ವಯೋ ನಿವೃತ್ತಿ ವಯಸ್ಸನ್ನು 58ಕ್ಕೆ ಪರಿಗಣಿಸಿ, ನಿವೃತ್ತಿ ವೇತನವನ್ನು ನಿಗಧಿಪಡಿಸುವಂತೆ ಆದೇಶಿಸಿರುತ್ತದೆ ಹಾಗೂ ಆರ್ಥಿಕ ಸೌಲಭ್ಯವನ್ನು ದಿನಾಂಕ 01-09-2005ರಿಂದ ನೀಡುವಂತೆ ಆದೇಶಿಸಿದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ : ಕಾಇ 284 ಎಲ್‌ಇಟಿ 2009, ಬೆಂಗಳೂರು, ದಿನಾಂಕ 11-01-2010**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ವೆಂಕೋಬರಾವ್, ನಿವೃತ್ತ ಉಪ-ಕಾರ್ಮಿಕ ಆಯುಕ್ತರು ಇವರು 55 ವರ್ಷಗಳ ತರುವಾಯದಲ್ಲಿ 58 ವರ್ಷಗಳವರೆಗೆ ಮರು ನೇಮಕಾತಿ ಮೇರೆಗೆ ಸಲ್ಲಿಸಿದ ಸೇವೆಯನ್ನು ಸತತವಾಗಿ ಸೇವೆಯಲ್ಲಿ ಮುಂದುವರೆದ ಅವಧಿಯೆಂದು ಪರಿಗಣಿಸಿ ಇವರ ವೇತನವನ್ನು ಕಾಲಕಾಲಕ್ಕೆ ಪರಿಷ್ಕರಿಸುವಲ್ಲಿ ಶ್ರೀಯುತರು 55 ವರ್ಷಗಳ ವಯೋ ನಿವೃತ್ತಿಯ ನಂತರದಲ್ಲಿ ಯಾವುದೇ ವಿಚ್ಛಿನ್ನತೆಯಿಲ್ಲದೆ ಮರು ನೇಮಕಾತಿಗೊಂಡು 58 ವರ್ಷಗಳವರೆಗೆ ಸತತವಾಗಿ ಸೇವೆಯನ್ನು ಸಲ್ಲಿಸಿರುವ ಅಂಶಗಳನ್ನು ಸೇವಾ ದಾಖಲೆಗಳ ರೀತ್ಯ ಖಚಿತಪಡಿಸಿಕೊಳ್ಳುವ ಷರತ್ತಿಗೊಳಪಟ್ಟು ವೇತನ, ನಿವೃತ್ತಿ ವೇತನ ಮತ್ತು ಅರ್ಹತಾದಾಯಕ ಸೇವೆಯನ್ನು ಪರಿಷ್ಕರಿಸಲು ಮತ್ತು ಅದರಂತೆ ನಿವೃತ್ತಿ ಸೌಲಭ್ಯಗಳಾದ ನಿವೃತ್ತಿ ಉಪದಾನ, ಗಳಿಕೆ ರಜೆ ನಗಧೀಕರಣದ ವ್ಯತ್ಯಾಸಕ್ಕೆ ಅರ್ಹರಾದಲ್ಲಿ ನಿಯಮಾನುಸಾರ ಪರಿಗಣಿಸಲು ಸರ್ಕಾರದ ಸಹಮತಿಯನ್ನು ನೀಡಲಾಗಿದೆ.

ಆದರೆ, ನ್ಯಾಯ ಮಂಡಳಿಯ ತನ್ನ ಆದೇಶದಲ್ಲಿ ತತ್ಸಂಬಂಧದಲ್ಲಿ ಅರ್ಹರಾಗುವ ಆರ್ಥಿಕ ಸೌಲಭ್ಯಗಳಿಗೆ ದಿನಾಂಕ 01-09-2005ರ ನಂತರದಲ್ಲಿ ಅರ್ಹರಾಗತಕ್ಕದೆಂದು ನಿರ್ದಿಷ್ಟವಾಗಿ ಆದೇಶಿಸಿರುವ ಹಿನ್ನೆಲೆಯಲ್ಲಿ ದಿನಾಂಕ 01-06-1984 ರಿಂದ ದಿನಾಂಕ 01-09-2005ರ ನಡುವಣ ಅವಧಿಗೆ ಸಂಬಂದಿಸಿದಂತೆ ಲಭ್ಯವಾಗುವ ಯಾವುದೇ ನಿವೃತ್ತಿ ವೇತನದ ಹಣಕಾಸಿನ ಸೌಲಭ್ಯಕ್ಕೆ ಅರ್ಜಿದಾರರು ಅರ್ಹರಾಗುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 773 ವೆಚ್ಚ-9/08, ದಿನಾಂಕ 02-01-09 ಹಾಗೂ ಆಇ 721 ವೆಚ್ಚ-9/09, ದಿನಾಂಕ 14-12-2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 127

**ಯು. ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಗಿಡಮೂಲಿಕೆ ಔಷಧಿ ಪ್ರಾಧಿಕಾರದ ರಾಜ್ಯ ಮಟ್ಟದ ಯೋಜನಾ ಪ್ರಸ್ತಾವನೆ ಮತ್ತು ತಡಿಕೆ (Screening) ಮೌಲ್ಯಮಾಪನ ಸಮಿತಿ ನೇಮಿಸುವ ಕುರಿತು.

**ಓದಲಾಗಿದೆ :** 1) ಕೇಂದ್ರ ಉತ್ತೇಜಿತ ಯೋಜನೆ ಮಾರ್ಗಸೂಚಿ ಸೆಪ್ಟೆಂಬರ್, 2008

2) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ಗಿಡಮೂಲಿಕೆ ಔಷಧಿ ಪ್ರಾಧಿಕಾರ (ಕಂ.ಪ.) ಇವರ ಪತ್ರ ಸಂಖ್ಯೆ : ಕಂಪ/ಪನಿಮಸ/090415.1, ದಿನಾಂಕ : 15-04-2009 ಹಾಗೂ ದಿನಾಂಕ : 18-07-2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸೆಪ್ಟೆಂಬರ್, 2008ರ ಕೇಂದ್ರ ಉತ್ತೇಜಿತ ಯೋಜನೆ ಮಾರ್ಗಸೂಚಿಯನ್ವಯ ರಾಷ್ಟ್ರೀಯ ಗಿಡಮೂಲಿಕಾ ಮಂಡಳಿಯು ರಾಜ್ಯದಲ್ಲಿ ಔಷಧಿ ಸಸ್ಯಗಳ ಸಂರಕ್ಷಣೆ, ಸಂಶೋಧನೆ ಮತ್ತು ಅಭಿವೃದ್ಧಿಗೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಈ ದಿಸೆಯಲ್ಲಿ ಹಲವಾರು ಸಂಶೋಧನಾ ಕೇಂದ್ರಗಳು, ವಿಶ್ವವಿದ್ಯಾನಿಲಯಗಳು, ವಿವಿಧ ಇಲಾಖೆಗಳು ಮತ್ತು ಇನ್ನಿತರ ಸಂಘ ಸಂಸ್ಥೆ ಮತ್ತು ಸರ್ಕಾರೇತರ ಸಂಸ್ಥೆಗಳಿಂದ ಔಷಧಿ ಸಸ್ಯ ಬೆಳವಣಿಗೆಗೆ ಪೂರಕವಾದ ಹಲವಾರು ಉತ್ತೇಜಿತ ಯೋಜನೆಗಳನ್ನು ಅನುಷ್ಠಾನಗೊಳಿಸಲು ಯೋಜನಾ ಪ್ರಸ್ತಾವನೆಗಳನ್ನು ಆಹ್ವಾನಿಸಿದ್ದು, ಇವುಗಳ ನಿರ್ಧರಿಸುವಿಕೆ ಮತ್ತು ಮೌಲ್ಯಮಾಪನಕ್ಕೆ ರಾಜ್ಯಮಟ್ಟದ ಸಮಿತಿಯನ್ನು ರಚಿಸುವಂತೆ ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ.

ಕೇಂದ್ರ ಉತ್ತೇಜಿತ ಯೋಜನೆಯ ಮಾರ್ಗಸೂಚಿಯನ್ವಯ ಮೇಲೆ (2)ರಲ್ಲಿ ಓದಲಾದ ದಿನಾಂಕ 15-04-2009 ಹಾಗೂ 18-07-2009ರ ಪತ್ರದಲ್ಲಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಕರ್ನಾಟಕ ರಾಜ್ಯ ಗಿಡಮೂಲಿಕೆ ಔಷಧಿ ಪ್ರಾಧಿಕಾರ ಇವರು ತಡಿಕೆ (Sreening) ಸಮಿತಿ ನೇಮಿಸುವ ಬಗ್ಗೆ ಸಮಿತಿಯ ಸದಸ್ಯರ ಮಾಹಿತಿಯನ್ನು ಕೆಳಗಿನಂತೆ ಸಲ್ಲಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

1) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ – ಆಧ್ಯಕ್ಷರು
ಅರಣ್ಯ ಭವನ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03

2) ಮುಖ್ಯ ಕಾರ್ಯನಿರ್ವಹಣಾಧಿಕಾರಿ, – ಸಂಚಾಲಕರು
ಕರ್ನಾಟಕ ರಾಜ್ಯ ಗಿಡಮೂಲಿಕ ಔಷಧಿ ಪ್ರಾಧಿಕಾರ,
ವನ ವಿಕಾಸ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03

3) ರಾಷ್ಟ್ರೀಯ ಗಿಡಮೂಲಿಕ ಔಷಧಿ ಮಂಡಳಿ, ನವದೆಹಲಿ ಇವರ ಪ್ರತಿನಿಧಿ – ಸದಸ್ಯರು

4) ಕೇಂದ್ರ ಸಂಸ್ಥೆಯ ಪ್ರತಿನಿಧಿಗಳು
ಅ) ಡಾ॥ ವಸಂತಕುಮಾರ್ – ಸದಸ್ಯರು
ಮುಖ್ಯ ವಿಜ್ಞಾನಿ, ಭಾರತೀಯ ತೋಟಗಾರಿಕಾ ಸಂಸ್ಥೆ, ಹೆಸರುಘಟ್ಟ,
ಬೆಂಗಳೂರು-89.
ಆ) ಡಾ॥ ಇ.ವಿ.ಎಸ್. ಪ್ರಕಾಶ ರಾವ್, – ಸದಸ್ಯರು
ಪ್ರಭಾರಿ ವಿಜ್ಞಾನಿ, ಕೇಂದ್ರೀಯ ಔಷಧಿ ಮತ್ತು ಸೌಗಂಧಿತ ಸಸ್ಯಗಳ ಸಂಸ್ಥೆ

5) ಅರಣ್ಯ ಇಲಾಖೆಯ ಪ್ರತಿನಿಧಿ
ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು – ಸದಸ್ಯರು
(ಅಭಿವೃದ್ಧಿ), ಅರಣ್ಯ ಭವನ, 18ನೇ ಅಡ್ಡ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03.

6) ಆಯುಷ್ ಇಲಾಖೆಯ ಪ್ರತಿನಿಧಿ
ಶ್ರೀ ಜಿ. ಎನ್. ಶ್ರೀಕಂಠಯ್ಯ, ಭಾ.ಆ.ಸೇ., – ಸದಸ್ಯರು
ನಿರ್ದೇಶಕರು, ಆಯುಷ್ ಇಲಾಖೆ, ಬೆಂಗಳೂರು

7) ಆಯುಷ್ ಇಲಾಖೆಯಿಂದ ನೇಮಿಸಲ್ಪಟ್ಟ ವಿಷಯ ತಜ್ಞರು
ಅ) ಆಶಾಲತಾ, – ಸದಸ್ಯರು
ಉಪನ್ಯಾಸಕರು ಮತ್ತು ಇಲಾಖೆಯ ಮುಖ್ಯಸ್ಥರು,
ದ್ರವ್ಯಗುಣ ಇಲಾಖೆ, ಸರ್ಕಾರಿ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಬೆಂಗಳೂರು.
ಆ) ಡಾ॥ ಎಂ. ಚಂದ್ರಶೇಖರ್, – ಸದಸ್ಯರು
ಉಪನ್ಯಾಸಕರು, ದ್ರವ್ಯಗುಣ ಇಲಾಖೆ, ಸರ್ಕಾರಿ ಆಯುರ್ವೇದಿಕ್ ಮೆಡಿಕಲ್ ಕಾಲೇಜು,
ಬೆಂಗಳೂರು.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 81 ಎಫ್‌ಪಿಸಿ 2009, ಬೆಂಗಳೂರು, ದಿನಾಂಕ 04-01-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕೇಂದ್ರ ಉತ್ತೇಜಿತ ಯೋಜನೆ ಮಾರ್ಗಸೂಚಿ ಸೆಪ್ಟೆಂಬರ್, 2008ರನ್ವಯ ರಾಜ್ಯ ಮಟ್ಟದ ಯೋಜನಾ ಪ್ರಸ್ತಾವನೆ ಮತ್ತು ತಡಿಕೆ (Screening) ಮೌಲ್ಯಮಾಪನ ಸಮಿತಿಗೆ ಈ ಕೆಳಕಂಡ ಸದಸ್ಯರುಗಳನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ನೇಮಕ ಮಾಡಿದೆ.

1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, – ಅಧ್ಯಕ್ಷರು
ಅರಣ್ಯ ಭವನ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03

2. ಮುಖ್ಯ ಕಾರ್ಯನಿರ್ವಹಣಾಧಿಕಾರಿ – ಸಂಚಾಲಕರು
ಕರ್ನಾಟಕ ರಾಜ್ಯ ಗಿಡಮೂಲಿಕ ಔಷಧಿ ಪ್ರಾಧಿಕಾರ, ವನ ವಿಕಾಸ,
18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03

3. ರಾಷ್ಟ್ರೀಯ ಗಿಡಮೂಲಿಕೆ ಔಷಧಿ ಮಂಡಳಿ, ನವದೆಹಲಿ ಇವರ ಪ್ರತಿನಿಧಿ – ಸದಸ್ಯರು

4. ಕೇಂದ್ರ ಸಂಸ್ಥೆಯ ಪ್ರತಿನಿಧಿಗಳು
ಅ) ಡಾ॥ ವಸಂತಕುಮಾರ್ – ಸದಸ್ಯರು
ಮುಖ್ಯ ವಿಜ್ಞಾನಿ, ಭಾರತೀಯ ತೋಟಗಾರಿಕಾ ಸಂಸ್ಥೆ, ಹೆಸರುಘಟ್ಟ, ಬೆಂಗಳೂರು–89
ಆ) ಡಾ॥ ಇ.ವಿ.ಎಸ್. ಪ್ರಕಾಶ ರಾವ್, – ಸದಸ್ಯರು
ಪ್ರಭಾರಿ ವಿಜ್ಞಾನಿ, ಕೇಂದ್ರಿಯ ಔಷಧಿ ಮತ್ತು ಸೌಗಂಧಿತ ಸಸ್ಯಗಳ ಸಂಸ್ಥೆ.
5. ಅರಣ್ಯ ಇಲಾಖೆಯ ಪ್ರತಿನಿಧಿ
ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು – ಸದಸ್ಯರು
(ಅಭಿವೃದ್ಧಿ), ಅರಣ್ಯ ಭವನ, 18ನೇ ಅಡ್ಡ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03
6. ಆಯುಷ್ ಇಲಾಖೆಯ ಪ್ರತಿನಿಧಿ
ಶ್ರೀ ಜಿ. ಎನ್. ಶ್ರೀ ಕಂಠಯ್ಯ, ಭಾ.ಆ.ಸೇ. – ಸದಸ್ಯರು
ನಿರ್ದೇಶಕರು,
ಆಯುಷ್ ಇಲಾಖೆ, ಬೆಂಗಳೂರು.
7. ಆಯುಷ್ ಇಲಾಖೆಯಿಂದ ನೇಮಿಸಲ್ಪಟ್ಟ ವಿಷಯ ತಜ್ಞರು
ಅ) ಡಾ॥ ಆಶಾಲತಾ – ಸದಸ್ಯರು
ಉಪನ್ಯಾಸಕರು ಮತ್ತು ಇಲಾಖೆಯ ಮುಖ್ಯಸ್ಥರು, ದ್ರವ್ಯಗುಣ ಇಲಾಖೆ,
ಸರ್ಕಾರಿ ಆಯರ್ವೇದಿಕ್ ಮೆಡಿಕಲ್ ಕಾಲೇಜು, ಬೆಂಗಳೂರು.
ಆ) ಡಾ॥ ಎಂ. ಚಂದ್ರಶೇಖರ್, – ಸದಸ್ಯರು
ಉಪನ್ಯಾಸಕರು, ದ್ರವ್ಯಗುಣ ಇಲಾಖೆ, ಸರ್ಕಾರಿ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಬೆಂಗಳೂರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 128

**ಪಿ. ಆರ್. ಕಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಮೆ: ಝೆನ್ ಪವರ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್ಇಡಿ/06/ಪಶ್ಚಿಮವಾಹಿನಿ/2008–09/1234 ದಿನಾಂಕ : 6/12–3–2009 ಹಾಗೂ ಪತ್ರ ಸಂಖ್ಯೆ : ಕೆಆರ್ಇಡಿ/06/ಪಶ್ಚಿಮವಾಹಿನಿ ಎಂಹೆಚ್ಎಸ್/2009/3139 ದಿನಾಂಕ : 22–09–2009.
2. ದಿನಾಂಕ : 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಝೆನ್ ಪವರ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಸ್ವಾಸ್ಥ್ಯ ಆಯುರ್ವೇದ ಗ್ರಾಮದ ಪಶ್ಚಿಮವಾಹಿನಿ ತೊರೆಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ : 23–10–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ಝೆನ್ ಪವರ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ, ಇಎನ್ 261 ಎನ್ಸಿಇ 2009, ಬೆಂಗಳೂರು ದಿನಾಂಕ : 5ನೇ ಜನವರಿ 2010**

ಮೆ:: ಝೆನ್ ಪವರ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಸ್ವಾಸ್ಥ್ಯ ಆಯುರ್ವೇದ ಗ್ರಾಮದ ಪಶ್ಚಿಮವಾಹಿನಿ ತೊರೆಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್

ಯೋಜನೆಯನ್ನು (Weir-Latitude. 12º24'10" Longitude. 76º41'15" Power House-Latitude: 12º23'10" Longitude : 76º42'15") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ /ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12 ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್.131

## ENERGY SECRETARIAT

**CORRIGENDUM No. EN 68 PSR 2009 Bangalore Dated : 8th January 2010**

The words and figures appearing in the G.O. No. EN 68 PSR 2009 dated : 21-10-2009 in Para No. 2 & 3 (a) of the order portion indicated in column 1 shall be read as indicated in column 2 below :

| No. | As existing | To be read as |
|---|---|---|
| Para-2 | The Principal Secretary to Government of Karnataka, Energy Department, Bangalore will act as the convener of the Selection committee. | The Additional Chief Secretary /Principal Secretary to Government of Karnataka, Energy Department, Bangalore will act as the convener of the selection Committee. |
| Para-3 | In terms of Section 84 (1) of the electricity Act 2003, finalize the selection of panel of names for appointment as Chairperson, KERC as expeditiously as possible and within 45 days from the date of this order. | In terms of Section 84 (1) of the Electricity Act 2003, finalize the selection of panel of names for appointment as Chairperson, KERC as expeditiously as possible and within 3 months from the date of this order. |

By Order and in the name of the Governor of Karnataka,
**(S.J. Sampath Kumar)**
Under Secretary to Government
Energy Department.

PR. 132

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಪ್ರಾಥಮಿಕ ಆರೋಗ್ಯ ಕೇಂದ್ರ ಸೂಡಿ ಇಲ್ಲಿ ವೈದ್ಯಾಧಿಕಾರಿ/ಸಿಬ್ಬಂದಿ ವರ್ಗದವರಿಗೆ ಹಳೆಯ ಕಟ್ಟಡವನ್ನು ನವೀಕರಿಸಿ ವಸತಿ ಗೃಹಗಳನ್ನು ನಿರ್ಮಿಸಲು ಅನುದಾನ ಬಿಡುಗಡೆ–ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಜಿಲ್ಲಾ ಯೋಜನಾ ನಿರ್ವಹಣಾಧಿಕಾರಿ, ಜಿಲ್ಲಾ ಯೋಜನಾ ನಿರ್ವಹಣಾ ಘಟಕ, ಕೆಹೆಚ್‌ಎಸ್‌ಡಿಆರ್‌ಪಿ, ಗದಗರವರ ಪತ್ರ ಸಂಖ್ಯೆ : ರಾಗ್ರಾಅಅ/ಜಿಯೋನಿಘಗ 116/2009–10, ದಿನಾಂಕ : 13–08–2009.
2. ಕಾರ್ಯಪಾಲಕ ಅಭಿಯಂತರರು, ಕೆ.ಹೆಚ್.ಎಸ್.ಡಿ.ಆರ್.ಪಿ. ವಿಭಾಗ, ಧಾರವಾಡ ಇವರ ಪತ್ರ ಸಂ. EE KHSDRP/DIV-DWD/Gadag/Estimate/2009-10/camp/Bang/ದಿನಾಂಕ : 13–10–2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸೂಡಿ, ರೋಣ ತಾಲ್ಲೂಕು, ಗದಗ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವೈದ್ಯಾಧಿಕಾರಿ, ಶುಶ್ರೂಷಕಿ ಹಾಗೂ "ಡಿ" ಗ್ರೂಪ್ ನೌಕರರಿಗೆ ವಸತಿ ಗೃಹಗಳು ಇರುವುದಿಲ್ಲವಾದ್ದರಿಂದ ಸದರಿ ಪ್ರಾಥಮಿಕ ಆರೋಗ್ಯ ಕೇಂದ್ರ ಸೂಡಿ, ಇಲ್ಲಿ ಬಳಕೆಯಾಗದಿರುವ ಹಳೆಯ ಕಟ್ಟಡವನ್ನು ನವೀಕರಿಸಿ, ಸದರಿ ಸಿಬ್ಬಂದಿಗೆ ವಸತಿ ಗೃಹಗಳನ್ನು ನಿರ್ಮಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಅದರಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸದರಿ

ಪ್ರಸ್ತಾವನೆಗೆ ರೂ. 10.00 ಲಕ್ಷಗಳ ಅಂದಾಜು ವೆಚ್ಚವನ್ನು ಕಾರ್ಯಪಾಲಕ ಅಭಿಯಂತರರು ಸಲ್ಲಿಸಿರುತ್ತಾರೆ.

ಕೆಹೆಚ್ಎಸ್‌ಡಿಆರ್‌ಪಿ ಸಂಗ್ರಹಣಾ ಯೋಜನೆ ಪ್ರಕಾರ ಯೋಜನೆಯಲ್ಲಿ 24x7 ಪ್ರಾಥಮಿಕ ಆರೋಗ್ಯ ಕೇಂದ್ರಗಳ ನವೀಕರಣಕ್ಕಾಗಿ, 2009-10ನೇ ಸಾಲಿನಲ್ಲಿ ಅನುದಾನವನ್ನು ನಿಗಧಿಗೊಳಿಸಲಾಗಿದೆ. ಸದರಿ ಯೋಜನೆಯಡಿ ಈ ಪ್ರಸ್ತಾವನೆಯನ್ನು ಪರಿಗಣಿಸಲು ಅವಕಾಶವಿದೆ.

ಆದ್ದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ, ಕೆಹೆಚ್ಎಸ್‌ಡಿಆರ್‌ಪಿ/ಎಸ್‌ಐಸಿಎಫ್/ನವೀಕರಣ/19/2009-10,**
**ಬೆಂಗಳೂರು ದಿನಾಂಕ : 13ನೇ ಜನವರಿ 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸೂಡಿ, ರೋಣ ತಾಲ್ಲೂಕು, ಗದಗ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರ ಅನುಕೂಲಕ್ಕಾಗಿ, ಈಗಾಗಲೇ ಇರುವ ಹಳೆಯ ಕಟ್ಟಡವನ್ನು ನವೀಕರಿಸಿ ವಸತಿ ಗೃಹಗಳನ್ನು ನಿರ್ಮಿಸಲು ಅಂದಾಜು ವೆಚ್ಚ ರೂ. 10,00,000/- (ರೂಪಾಯಿ ಹತ್ತು ಲಕ್ಷಗಳು ಮಾತ್ರ) ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ಶಶಿಧರ್**
ಸರ್ಕಾರದ ಉಪ ಕಾರ್ಯದರ್ಶಿ,
ಕೆಹೆಚ್ಎಸ್‌ಡಿಆರ್‌ಪಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್.133

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ, ಶಿರ್ಶಿ ತಾಲ್ಲೂಕು , ವದ್ದಲ ಹತ್ತಿರ ಹಳ್ಳಕ್ಕೆ ಬಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**

1. ದಿನಾಂಕ: 11-11-09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ-2/2009-10/6679.
2. ಅಧ್ಯಕ್ಷರು ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ : 26-12-09ರ ಪತ್ರ ಸಂಖ್ಯೆ : ಮುಸದ/ಆಪ್ತ ಶಾಖೆ/ಟೆಂಡರ್/08-09/4972.

**ಪ್ರಸ್ತಾವನೆ :**

ಉತ್ತರ ಕನ್ನಡ ಜಿಲ್ಲೆ, ಶಿರ್ಶಿ ತಾಲ್ಲೂಕಿನ ವದ್ದಲ ಹತ್ತಿರ ಹಳ್ಳಕ್ಕೆ ಬಾಂದಾರ ನಿರ್ಮಾಣ ಕಾಮಗಾರಿಯ 25.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ದಿನಾಂಕ : 26-02-09 ರಂದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಳಿಯಾಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ: 21-02-2009 |
| 2 | ವಿಜಯ ಕರ್ನಾಟಕ ದಿನಪತ್ರಿಕೆ | ದಿ: 04-03-2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 20 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರನ್ನು ದಿನಾಂಕ : 09-07-09 ರಂದು ತೆರೆಯಲಾಗಿದೆ. ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 24,60,619/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 24,23,207/- |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಪಿ.ಕೆ. ಶೆಟ್ಟಿ,<br>1ನೇ ದರ್ಜೆ ಗುತ್ತಿಗೆದಾರರು | ರೂ. 28,24,559/– | 14.79 ಹೆಚ್ಚು | 16.56 ಹೆಚ್ಚು |
| 2 | ಗಣಪಯ್ಯಾ ನಾಯಕ್<br>1ನೇ ದರ್ಜೆ ಗುತ್ತಿಗೆದಾರರು | ರೂ. 30,60,656/– | 24.38 ಹೆಚ್ಚು | 26.30 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1 ರಲ್ಲಿರುವ ಶ್ರೀ ಪಿ.ಕೆ. ಶೆಟ್ಟಿ, 1 ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 28,24,559–00 ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.79 ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರನ್ನು ಸರ್ಕಾರದ ಮಟ್ಟದಲ್ಲಿ ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 13–11–09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 24,23,207–00ಗಳ ಮೇಲೆ ಶೇಕಡ 13.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 27,44,282–00 ಗಳಿಗೆ ಕಾಮಗಾರಿಯನ್ನು ಶ್ರೀ ಪಿ.ಕೆ. ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಕುಮಟಾ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 85 ಅಪಿಬಂ 2009, ಬೆಂಗಳೂರು ದಿನಾಂಕ : 13ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉತ್ತರ ಕನ್ನಡ ಜಿಲ್ಲೆ, ಶಿರ್ಶಿ ತಾಲ್ಲೂಕಿನ ವದ್ದಲ ಹತ್ತಿರ ಹಳ್ಳಕ್ಕೆ, ಬಾಂದಾರ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರ ಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 24,23,207–00 ಗಳ ಮೇಲೆ ಶೇಕಡ 13.25 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 27,44,282–00ಗಳಿಗೆ (ಇಪ್ಪತ್ತೇಳು ಲಕ್ಷದ ನಲವತ್ತಾಲ್ಕು ಸಾವಿರದ ಇನ್ನೂರ ಎಂಭತ್ತೆರಡು ರೂ.ಗಳು ಮಾತ್ರ) ಶ್ರೀ ಪಿ.ಕೆ. ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಕುಮಟಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ :ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸುಧಾಕರ ಶೆಟ್ಟಿ**

ಪಿ.ಆರ್.134

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ನರಿಬೋಳೆ ಕ್ಷಾರಭೂಮಿ ಯೋಜನೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ : ಸನೀ 15 ಮಸಾವಿ 2009(1), ದಿನಾಂಕ : 26-02-09
2. ದಿನಾಂಕ : 11-11-09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ : ಮುಇಂ/ಸನೀ(ಉ) ವಲಯ/ಬಿಜೆಪಿ/ ಪಿಬಿ-2/2009-10/6680.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ : 26-12-09 ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್-08-09/4972.

**ಪ್ರಸ್ತಾವನೆ :**

ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ನರಿಬೋಳೆ ಕ್ಷಾರಭೂಮಿ ಯೋಜನೆ ಕಾಮಗಾರಿಯ 50.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ : 26-02-09 ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಳಿಯಾಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ: 21-02-2009 |
| 2 | ಕನ್ನಡ ಪ್ರಭ ದಿನಪತ್ರಿಕೆ | ದಿ: 03-03-2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 14 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರನ್ನು ದಿನಾಂಕ : 22-07-09 ರಂದು ತೆರೆಯಲಾಗಿದ್ದು. ಅದರಲ್ಲಿ ಈ ಕೆಳಕಂಡ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ಅವರು ಸೂಚಿಸಿರುವ ದರಗಳ ವಿವರ ಕೆಳಕಂಡಂತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 46,75,876/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 46,75,876/- |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಆರ್.ಎಸ್. ಶಾನಭಾಗ,<br>1ನೇ ದರ್ಜೆ ಗುತ್ತಿಗೆದಾರರು | ರೂ. 53,43,317/- | 14.27 ಹೆಚ್ಚು | 14.27 ಹೆಚ್ಚು |

ಮೇಲ್ಕಂಡಂತೆ ಶ್ರೀ ಆರ್.ಎಸ್. ಶಾನಭಾಗ, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತ ರೂ. 53,43,317-00 ಗಳಾಗಿದ್ದು, ಈ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರಿಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.27 ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ : 11-11-09ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 13-11-09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ

ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 46,75,876–00ಗಳ ಮೇಲೆ ಶೇಕಡ 13.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 52,95,430–00 ಗಳಿಗೆ ಕಾಮಗಾರಿಯನ್ನು ಶ್ರೀ ಆರ್.ಎಸ್. ಶಾನಭಾಗ, 1ನೇ ದರ್ಜೆ ಗುತ್ತಿಗೆದಾರರು, ಕುಮಟಾ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 86 ಅಪಿಬಂ 2009, ಬೆಂಗಳೂರು, ದಿನಾಂಕ : 13ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕಿನ, ನರಿಬೋಳೆ ಕ್ಷಾರಭೂಮಿ ಯೋಜನೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರ ಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 46,75,876–00 ಗಳ ಮೇಲೆ ಶೇಕಡ 13.25 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 52,95,430–00ಗಳಿಗೆ (ಐವತ್ತೆರಡು ಲಕ್ಷದ ತೊಂಭತ್ತೈದು ಸಾವಿರದ ನಾನೂರ ಮೂವತ್ತು ರೂ.ಗಳು ಮಾತ್ರ) ಶ್ರೀ ಆರ್.ಎಸ್. ಶಾನಭಾಗ, 1ನೇ ದರ್ಜೆ ಗುತ್ತಿಗೆದಾರರು, ಕುಮಟಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ :ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.135 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## WATER RESOURCES SECRETARIAT

**Sub :** According Administrative Approval to the Minor Irrigation Projects under Accelerated Irrigation Benefit Programme-Regarding.

**Read:** Letter No. CEMI/(S) TA-3/AE-10/AIBP/2009-10/4925 dt. 22.12-2009 from the Chief Engineer, Minor Irrigation South Zone, Bangalore.

-------

**Preamble:**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category States are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought Prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of central grant that will be 90% of the project cost. The balance cost of the project will have to be borne by the State as State's share.

Government of Karnataka has identified the new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following schemes in DPAP taluks are being considered for according administrative approval.

**Head of Account : 4702-00-101-1-10-139 AIBP Major Works** **Amount Rs. In Lakhs**

| Sl. No. | Name of the Scheme | District | Taluka | Estimated Cost | Potential Planned in Ha. | Cost per Ha. |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Construction of channel of pickup across Purekallumane (Malemane) in Baluru Hobli. | Chikkamagalur | Chikkamagalur | 50.00 | 50.00 | 1.00 |
| 2 | Construction of pickup across Kuve Kallu Oddue | Chikkamagalur | Chikkamagalur | 40.00 | 40.00 | 1.00 |
| 3 | Construction of canal to Belavadi tank | Chikkamagalur | Chikkamagalur | 200.00 | 250.00 | 0.80 |
| 4 | Construction of pickup across Horanadu halla near Kalasa Hobli | Chikkamagalur | Mudigere | 50.00 | 50.00 | 1.00 |
| 5 | Construction of pickup across Karakki channel in Kalasa Hobli | Chikkamagalur | Mudigere | 50.00 | 50.00 | 1.00 |
| 6 | Balance work for construction of Percolation tank near Karalahalla near Bommenahalli in kasaba hobli in Turuvekere Tq, Tumkur Dist. | Tumkur | Turuvekere | 40.00 | 30.00 | 1.33 |
| 7 | Construction of check dam across Vrushabhavathi river near Venkatapura | Kolar | Bangarapet | 30.00 | 50.00 | 0.60 |
| 8 | Construction of check dam across Markandeya halla near Kanamanahalli | Kolar | Bangarapet | 40.00 | 51.00 | 0.78 |
| | | | | 500.00 | | |

**Government Order No. SANEEYEE 236 MASAVI 2009 (22),**
**Bangalore, Dated 7th January 2010**

In view of the above, the Administrative approval is hereby accorded for taking up the above 8 works with an estimated cost totalling of Rs. 500.00 lakhs (Five hundred lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed within a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.

4. The Central share is in the form of grant to the State.
5. The Projects will be implemented by the Water Resources Department (Minor Irrigation) as per the KTPP act.
6 The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs
8. Water users association shall be formed for post construction maintenance and the scheme shall be handed over to the same after its construction for the O&M.

This Order is issued with the concurrence of Finance Department in their note No.PWD-890-FC-1/2009 dated 09-12-2009

By Order and in the name of the Governor of Karnataka,

**K. SUDHAKARA SHETTY**

PR. 136

Under Secretary to Government,
Water Resources Department (Minor Irrigation)

**WATER RESOURCES SECRETARIAT**

**Sub :** According Administrative Approval to the Minor Irrigation Projects under Accelerated Irrigation Benefit Programme-Regarding.

**Read:** Letter No. CEMI/(S) TA-3/AE-10/AIBP/2009-10/4925 dt. 22.12-2009 from the Chief Engineer, Minor Irrigation South Zone, Bangalore.

**Preamble:**

As per the modified guidelines issued by the Government of India, Minor Irrigation schemes with potential more than 50 hectares which serve tribal areas and drought prone areas in the non-special category States are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought Prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of central grant that will be 90% of the project cost. The balance cost of the project will have to be borne by the State as State's share.

Government of Karnataka has identified the new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following schemes in DPAP taluks are being considered for according administrative approval.

**Head of Account : 4702-00-101-1-10-139 AIBP Major Works** **Amount Rs. In Lakhs**

| Sl. No. | Name of the Scheme | District | Taluka | Estimated Cost | Potential Planned in Ha. | Cost per Ha. |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Construction of new tank near Ganguru village in Belur taluk, Hassan dist. | Hassan | Belur | 118.00 | 143.00 | 0.83 |

| | | | | | | |
|---|---|---|---|---|---|---|
| 2 | Construction of new tank (percolation) near Siddaswamy gudda village in Arasikere taluk, Hassan dist. | Hassan | Arasikere | 77.00 | 63.00 | 1.22 |
| 3 | Construction of pickup near Jenukal siddapur haranahalli tank feeder valley in Arasikere taluk, Hassan dist. | Hassan | Arasikere | 75.00 | 121.00 | 0.62 |
| 4 | Construction of pickup (bridge cum barrage) near Nagenahalli village in Javagal hobli in Arasikere taluk, Hassan dist. | Hassan | Arasikere | 78.00 | 52.00 | 1.50 |
| 5 | Construction of pickup across patnahalla in Bidre panchayath | Chikkama galur | Chikkama galur | 60.00 | 105.00 | 0.57 |
| 6 | Construction of channel of pickup across Malaganahalla in Devadan Panchayath | Chikkama galur | Chikkama galur | 60.00 | 105.00 | 0.57 |
| | | | | 468.00 | | |

**Government Order No. SANEEYEE 236 MASAVI 2009 (21), Bangalore, Dated 7th January 2010**

In view of the above, the Administrative approval is here by accorded for taking up the above 6 works with an estimated cost totalling of Rs. 468.00 lakhs (Four hundred sixtyeight lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed within a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt and State Govt.
4. The Central share is in the form of grant to the State.
5. The Projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs
8. Water users association shall be formed for post construction maintenance and the scheme shall be handed over to the same after its construction for the O&M.

This Order is issued with the concurrence of Finance Department in their note No.PWD-890-FC-1/2009 dated 09-12-2009

By Order and in the name of the Governor of Karnataka,

**K. SUDHAKARA SHETTY**

Under Secretary to Government,

Water Resources Department (Minor Irrigation)

PR. 137

## COMMERCE & INDUSTRIES SECRETARIAT

**Sub :** Enhancement of borrowing limit of Karnataka Industrial Areas Development Board from current Rs.200 crores to Rs.500 crores and concurrence for Government guarantee.

**Read :** (1) Chief Executive Officer & Executive Member, KIADB, letter No.IADB/COF/3237 / 2009-10, date 1-7-2009.

(2) Chief Executive Officer & Executive Member, KIADB, letter No. KIADB/COF-112/ 6542/09-10, date. 8-9-2009.

**Preamble:**

In reference letters read (1) & (2) above Karnataka Industrial Areas Development Board has submitted the proposals to enhance the borrowing limit to Rs.500 crores from the existing Rs.200 crores as it is engaged in acquiring huge extent of land across the State for various projects. The Board would require Rs.1000 crores every year for ongoing acquisition as well as developments.

In the budget speech of Hon'ble Chief Minister for 2009-10, the following schemes are announced.

1. State will allocate Rs.1000 crores for acquiring 1000 to 2000 acres of land in each district through Karnataka Industrial Areas Development Board to facilitate establishment of thousands of small and medium enterprises. It is also proposed to attract foreign capital to the State Industrial Sector by establishing industrial colonies.
2. Establishment of Steel Park in about 10000 acres at Koppal, Bellary & Bagalkot Districts.
3. Establishment of Foundry Park in about 500 acres at Mache, Belgaum.
4. Establishment of Spice Park in about 120 acres at Haveri.
5. Establishment of Auto Parks in about 20 to 25 acres at Basavakalyan, Bidar.
6. Establishment of Silver Park in about 50 acres at Chikkodi, Belgaum.

Further, the Board is acquiring huge extent of lands under Suvarna Karnataka Industrial Corridor Project and Chennai-Bangalore-Mumbai Industrial Corridor Project so as to attract the foreign capital as well as indigenous industrial investments in the State. In this process, Land Bank is being created of about 1,62,000 acres of land across the State for various schemes/programmes.

In the 292nd Board meeting held on 21.3.2009 proposal for availing term loan of Rs.1000 crores for payment of land compensation to the following projects was discussed.

| | | |
|---|---|---|
| 1. Aerospace manufacturing components for IA at Devanahalli | - | 918-10 acres |
| 2. Hardward Park at Devanahalli | - | 869-10 acres |
| 3. IT Park at Devanahalli | - | 1028-20 acres |
| 4. Other Industrial Areas | - | <u>2259-28 acres</u> |
| **Total** | - | <u>5075-28 acres</u> |

After detailed discussions the following suggestions were made by the Board in the 292nd Board Meeting.

1. To mobilize additional resources in the order of Rs.500 to 1000 crores to bridge the gap between the capital receipts and capital expenditure in case of acquisition of large extent of lands.
2. To enhance the present borrowing power of Karnataka Industrial Areas Development Board from Rs.200 crores to the required amount with the approval of the State Government and also.
3. To avail the services of expert financial consultants for advising the Board on the matters such as, quantum of loan, period of repayment, source of borrowings, credit rating etc., for mobilization of additional funds.

Since, the Govt. has already approved the borrowing limit up to Rs.200 crores, Board requested approval from the Govt. for enhancing the borrowing limit from Rs.200 crores to Rs.500 crores in the first stage.

In view of the reasons explained above Government has examined the proposal in detail and decided to enhance the borrowing limit of Karnataka Industrial Areas Development Board from Rs.200 crores to Rs.500 crores and also to give Government guarantee as per the norms. Hence the following order.

**GOVERNMENT ORDER NO. CI 245 SPQ 2009, BANGALORE, DATED 8TH JANUARY 2010**

I. After careful consideration of the proposal and in exercise of the powers conferred by section 4 of KIADB rules 1966 in chapter III Government is pleased to concur for enhancing the borrowing limit of Karnataka Industrial Areas Development Board from current Rs.200 crores to Rs.500 crores. Government also concurs for the Government guarantee subject to the Cabinet approval and payment of the guarantee fee as per the norms. As the guarantee is being sought on revolving basis, it may be provided for period upto 31-3-2011; thereafter Karnataka Industrial Areas Development Board may seek annual renewal.

II. Karnataka Industrial Areas Development Board has to take action accordingly & submit proposal.

This Order issues with the concurrence of Finance Department vide note No.FD 1584 Exp-1/09, dated 22-12-2009.

By Order and in the name of the Governor of Karnataka,

**K.M. VEERAIAH,**

Under Secretary to Government (ID)

Commerce & Industries Department.

PR. 119

**COMMERCE & INDUSTRIES SECRETARIAT**

**Sub :** The Project Proposal of M/s. CF Biotec Pvt. Ltd. Mumbai to Enhance the Plant capacity.

**Read :** (1) Proceedings of the 15th State High Level Clearance Committee (SHLCC) meeting held on 21-8-2008

(2) G.O. No. CI 314, 2008, Bangalore.

(3) Proceedings of the 17th State High Level Clearance Committee (SHLCC) meeting held on 28-1-2009.

**Preamble:**

The Proposal of M/s. CF Biotec Pvt. Ltd. Mumbai to Enhance the Plant capacity from 125 KLPD to atleast 175 KLPD of total Spirit, Bio Diesel from 30TPD to 50 TPD and Co-generation plant from 9 MW to 30 MW in 120 acres of land, at Sogal Village, Saudatti taluk, Belgaum District, with an investment of Rs.345.49 crores. The project proposes to provide employment to about 253 persons.

In the 17th State High Level Clearance Committee (SHLCC) held on 28-1-2009, the Committee has approved the expansion proposed by the project proponents.

The Government has examined the recommendations made by the State High Level Clearance Committee in the 17th SHLCC Meeting held on 28-1-2009 in all respects.

Hence the following order :

**GOVERNMENT ORDER NO. CI 67 SPI 2009, BANGALORE, DATED 6TH JANUARY 2010**

The Government is pleased to accord approval to M/s. CF Biotec Pvt. Ltd. Mumbai to enhance the Plant capacity from 125 KPD to 175 KLPD of total Spirit, Co-generation from 9 MW to 30 MW in 120

acres of land, at various Sy Nos of Sogal Village, Saudatti taluk, Belgaum District, with an investment of Rs.345.49 crores. The project shall provide employment to about 253 persons.

With respect to their enhancement of Bio Diesel power plant capacity from 30 TPD to 50 TPD the Company has to get the technical approval from Karnataka Renewable Energy Development Limited.

This issues with the concurrence of Energy Department vide No. EN 459 NCE 2009, Date 24-12-2009.

This approval is valid for a period of 3 years from the date of issue.

By Order and in the name of the Governor of Karnataka,

**APARNA PAVATE**

PR. 120

Desk Officer (Technical Cell)

Commerce & Industries Department.

**COMMERCE & INDUSTRIES SECRETARIAT**

**Sub :** Extending Sales Tax concessions for pipeline projects - reg.

**Read :**
1. G.O. No. FD 303 DSL 99 dated 07-01-2000.
2. G.O. No. FD 303 DSL 99 dated 13-07-2000.
3. G.O. No. FD 303 DSL 99 dated 21-03-2002.
4. Proceedings of the meeting held on 24.08.2009 under the chairmanship of Principal Secretary to Govt. Commerce & Industries Department.

**Preamble:**

In the Govt. Orders read at (1), (2) & (3) above, certain conditions have been stipulated for extending Sales Tax concessions for pipeline projects. The following 3 projects are confirming to the conditions stipulated in the Govt. Orders.

| Sl. No. | Details of the Unit | PRC dated should be before 31.12.1999 | Application submitted to FI before 31-12-1999, if own finance 25% of investment before 31-12-1999 | Land allotment/ purchased before 31-12-1999 | Production date should be before 31-12-2001 | Investment of fixed assets created upto date of commencement of production (Rs. In lakhs) |
|---|---|---|---|---|---|---|
| 1 | M/s. Mahalakshmi Plastics, KIADB Industrial Area, Holenarasipura, Hassan Dist. | 16-1-1997 | 23-11-1999 | KIADB 2-4-1997 | 3-11-2001 | 14.25 |
| 2 | M/s. Kamala Industries, Mysore (Hot Tops/APC/ Powder Laddes Powder) | 1-6-1996 | Own finance 61.58% | KIADB allotted plt on 13-3-1997 | 23-1-2001 | 14.38 |
| 3 | M/s. Automotive Axles Ltd., Mysore [3rd expansion programme] [Automotive Axies/ Brakes] Approval of GoI (IEM filed) | Industrial licence 1-4-1982 by GoI | Funds raised through rights to issue share holders | KIADB 6-3-1981 | 25-6-1995 | 3972.16 Expansion-I |

Hence the following order :

**GOVERNMENT ORDER NO. CI 31 SPI 2009, BANGALORE, DATED 4TH JANUARY 2010**

The Government is pleased to extend Sales Tax concessions to :

1. M/s. Mahalakshmi Plastics, KIADB Industrial Area, Holenarasipura, Hassan Dist.
2. M/s. Kamala Industries, Mysore
3. M/s. Automotive Axles Ltd., Mysore

With the following conditions of Finance Department.

a) The period of ST incentives/concessions that the pipeline units would normally be entitled to should be reckoned with effect from 1st January 2002, irrespective of the actual date of commercial production.

b) The sales tax exemption should only be prospective i.e., it should not involve refund of tax already paid by these units.

The Commissioner for Industrial Development and Director of Industries & Commerce is authorized to issue the Fixed Assets Valuation Certificate (FAVC) incorporating the conditions laid by Finance Department.

The Commercial Tax Department will have to extend the sales tax exemptions as per the respective Industrial Policies with effect from 01-01-2002 irrespective of date of commercial production.

This issues with the concurrence of Finance Department (Exp.1) vide No. FD 1695 Exp.1 2009/ FD 525 Exp 1 2008, dated 15-12-2009.

By Order and in the name of the Governor of Karnataka,

**APARNA PAVATE**

PR. 121

Desk Officer (Technical Cell)

Commerce & Industries Department.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ
## ಸೇರ್ಪಡೆ ಆದೇಶ

**ಸಂಖ್ಯೆ: ವಾಕೈ 140 ಕೈಸೇವಿ 2009, ಬೆಂಗಳೂರು, ದಿನಾಂಕ: 5ನೇ ಜನವರಿ 2010**

ಸರ್ಕಾರದ ಆದೇಶ ಸಂಖ್ಯೆ ವಾಕೈ 140 ಕೈಸೇವಿ 2009, ಬೆಂಗಳೂರು ದಿನಾಂಕ 05-10-2009 ರಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಸಮೂಹ 'ಎ' ಗುಂಪಿನ ವೇತನ ಶ್ರೇಣಿ ರೂ. 18,150-26,925 ವೇತನ ಶ್ರೇಣಿಯ ಉಪ ನಿರ್ದೇಶಕರಾದ ಶ್ರೀ ಎ. ಲೋಕೇಶ್, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಎಂಬುವುದರ ಮುಂದೆ "ದಿ: 20-9-2009 ರಂದು ಆಯ್ಕೆ ಕಾಲಿಕ ವೇತನ ಶ್ರೇಣಿಗೆ ಅರ್ಹರಾಗಿದ್ದಾರೆ" ಎಂಬುದನ್ನು ಸೇರ್ಪಡಿಸಿಕೊಂಡು ರೂ. 19,050-27,600 ನ್ನು ಮಂಜೂರು ಮಾಡಿದೆ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ. ಪ್ರಕಾಶ್,**

ಪಿ.ಆರ್.122

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ಸಕ್ಕರೆ ವರ್ಷ 2006-07ರ ಸಾಲಿಗೆ ವಿಶೇಷ ನೆರವು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 07 (ಭಾಗ-2), ದಿನಾಂಕ 13-06-2007.
2. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2) (3), ದಿನಾಂಕ 2-11-2007.
3. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2) (8), ದಿನಾಂಕ 25-03-2008
4. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13/2007-08, ದಿನಾಂಕ 03-11-2008 ಮತ್ತು 28-02-2009.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ ಕೆಲವು ಸಹಾಯಧನ ಸೌಲಭ್ಯವನ್ನು ನೀಡಲು ಸರ್ಕಾರದ ಒಪ್ಪಿಗೆಯನ್ನು ನೀಡಲಾಗಿದೆ.

ಮೇಲೆ ಓದಲಾದ (2) ರಲ್ಲಿರುವ ಸರ್ಕಾರದ ಆದೇಶದಲ್ಲಿ ದಿನಾಂಕ 16–04–2007 ರಿಂದ ದಿನಾಂಕ 31–05–2007 ರವರೆಗೆ ವಿಸ್ತರಿಸಿದ ಅವಧಿಯಲ್ಲಿ ಸಕ್ಕರೆ ಕಾರ್ಖಾನೆಗಳು ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂ.ಗಳ ಸಹಾಯಧನ ಪಾವತಿ ಸಂಬಂಧ 20,38,64,000 ರೂ.ಗಳನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3) ರಲ್ಲಿರುವ ಸರ್ಕಾರದ ಆದೇಶದಲ್ಲಿ ವಿಸ್ತರಿಸಿದ ಅವಧಿ ನಂತರವು ಅಂದರೆ ದಿನಾಂಕ 01–06–2007 ರಿಂದ 31–07–2007 ರವರೆಗೆ ಸಕ್ಕರೆ ಕಾರ್ಖಾನೆಗಳು ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂ.ಗಳ ಸಹಾಯಧನ ಪಾವತಿ ಸಂಬಂಧ 8,74,92,000 ರೂ.ಗಳನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರದಲ್ಲಿ ಮೇಲೆ ಓದಲಾದ (2) ಮತ್ತು (3) ರಲ್ಲಿರುವ ಆದೇಶಗಳಲ್ಲಿ ಬಿಡುಗಡೆಗೊಳಿಸಿದ ಸಹಾಯಧನವನ್ನು ಮಂಡ್ಯ, ಮೈಸೂರು ಮತ್ತು ರಾಮನಗರ ಜಿಲ್ಲೆಗಳ ಜಿಲ್ಲಾಧಿಕಾರಿಗಳು ದಿನಾಂಕ 31–03–2008 ರೊಳಗೆ ಹಣ ಡ್ರಾ ಮಾಡದೇ ಇದ್ದ ಕಾರಣ ಸದರಿ ಹಣವನ್ನು ಈ ಕೆಳಕಂಡ 5 ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆಗೊಳಿಸಲಾಗಿಲ್ಲವೆಂದು ಈ ಹಣವನ್ನು 2008–09ನೇ ಸಾಲಿನಲ್ಲಿ ಮರುಹೊಂದಾಣಿಕೆ ಮೂಲಕ ಬಿಡುಗಡೆಗೊಳಿಸುವ ಬಗ್ಗೆ ಆಯುಕ್ತರು ಕಬ್ಬು ಅಭಿವೃದ್ಧಿರವರು ತಮ್ಮ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

(ರೂ.ಗಳಲ್ಲಿ)

| ಕ್ರ. ಸಂ. | ಕಾರ್ಖಾನೆ | ಮೊತ್ತ | ಜಿಲ್ಲಾಧಿಕಾರಿ |
|---|---|---|---|
| 1. | ಎನ್.ಎಸ್.ಎಲ್. ಶುಗರ್ಸ್ (ಲಿ) | 89,11,000 | ಮಂಡ್ಯ |
| 2. | ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ) | 69,10,000 | ಮಂಡ್ಯ |
| 3. | ಮೈಸೂರು ಸಕ್ಕರೆ ಕಾರ್ಖಾನೆ | 8,69,000 | ಮಂಡ್ಯ |
| 4. | ಬನ್ನಾರಿ ಅಮ್ಮನ್ ಶುಗರ್ಸ್ (ಲಿ) | 55,11,000 | ಮೈಸೂರು |
| 5. | ಎಸ್.ಪಿ.ಆರ್. ಶುಗರ್ಸ್ (ಲಿ) | 13,82,000<br>6,98,000 | (ಆದೇಶ ದಿ. 02–11–07)<br>(ಆದೇಶ ದಿ. 25–3–08)<br>ರಾಮನಗರ |
| | **ಒಟ್ಟು** | **2,42,81,000** | |

ಆಯುಕ್ತರು, ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಕ್ರಮ ಸಂಖ್ಯೆ (4) ಮತ್ತು (5) ರಲ್ಲಿರುವ ಕಾರ್ಖಾನೆಗಳನ್ನು ಹೊರತುಪಡಿಸಿ, ಉಳಿದ 3 ಕಾರ್ಖಾನೆಗಳು ಸರ್ಕಾರಕ್ಕೆ ನೀಡಬೇಕಾದ ಬಡ್ಡಿ ರಹಿತ ಸಾಲ ಮತ್ತು ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿರುವುದರಿಂದ ನೀಡಬೇಕಾದ ಸಹಾಯಧನದಲ್ಲಿ ಹೊಂದಾಣಿಕೆ ಮಾಡಿಕೊಂಡು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 298 ಎಸ್‌ಜಿಎಫ್ 2008, ಬೆಂಗಳೂರು, ದಿನಾಂಕ 5ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ 5 ಸಕ್ಕರೆ ಕಾರ್ಖಾನೆಗಳಿಗೆ ಸಂಬಂಧಿಸಿದಂತೆ ವಿಸ್ತರಿಸಿದ ಅವಧಿ ದಿನಾಂಕ 16–04–2007 ರಿಂದ 31–05–2007 ಮತ್ತು ವಿಸ್ತರಿಸಿದ ಅವಧಿಯ ನಂತರವು ಅಂದರೆ 01–06–2007 ರಿಂದ 31–07–2007 ರವರೆಗೆ ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂ.ಗಳಂತೆ ಸಹಾಯಧನವನ್ನು ಮೇಲೆ ಓದಲಾದ (2) ಮತ್ತು (3) ಆದೇಶಗಳಲ್ಲಿ ಬಿಡುಗಡೆಗೊಳಿಸಿದ್ದು, ಈ ಹಣವನ್ನು 2008–09ನೇ ಸಾಲಿನಲ್ಲಿ ಸಂಬಂಧಿಸಿದ ಜಿಲ್ಲಾಧಿಕಾರಿಗಳು ಡ್ರಾ ಮಾಡದೆ ಇದ್ದ ಪ್ರಯುಕ್ತ ಸದರಿ ಹಣವನ್ನು ಮರು ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

(ರೂ.ಗಳಲ್ಲಿ)

| ಕ್ರ. ಸಂ. | ಕಾರ್ಖಾನೆ | ಮೊತ್ತ | ಕಾರ್ಖಾನೆಗಳಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಮೊತ್ತ | | ನಿವ್ವಳ ಕಾರ್ಖಾನೆಗಳಿಗೆ ಬಿಡುಗಡೆ ಮೊತ್ತ/ ಜಿಲ್ಲಾಧಿಕಾರಿಗಳು |
|---|---|---|---|---|---|
| 1. | ಎನ್.ಎಸ್.ಎಲ್. ಶುಗರ್ಸ್ (ಲಿ), ಮಂಡ್ಯ | 89,11,000 | 89,11,000 | (980.94 ಲಕ್ಷ) | –– |
| 2. | ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ), ಮಂಡ್ಯ | 69,10,000 | 69,10,000 | (1055.56 ಲಕ್ಷ) | –– |
| 3. | ಮೈಸೂರು ಸಕ್ಕರೆ ಕಾರ್ಖಾನೆ, ಮಂಡ್ಯ | 8,69,000 | 8,69,000 | (1028.24 ಲಕ್ಷ) | –– |
| 4. | ಬನ್ನಾರಿ ಅಮ್ಮನ್ ಶುಗರ್ಸ್ (ಲಿ), ನಂಜನಗೂಡು | 55,11,000 | –– | –– | 55,11,000 (ಜಿಲ್ಲಾಧಿಕಾರಿ, ಮೈಸೂರು) |
| 5. | ಎಸ್.ಪಿ.ಆರ್. ಶುಗರ್ಸ್ (ಲಿ), ರಾಮನಗರ | 13,82,000<br>6,98,000 | –– | –– | 20,80,000 (ಜಿಲ್ಲಾಧಿಕಾರಿ, ರಾಮನಗರ) |
| | **ಒಟ್ಟು** | **2,42,81,000** | **1,66,90,000** | –– | **75,91,000** |

ಮೇಲಿನ ಕಂಡಿಕೆಯಲ್ಲಿ ವಿವರಿಸಿದಂತೆ ಕ್ರಮ ಸಂಖ್ಯೆ (1) ರಿಂದ (3) ರಲ್ಲಿರುವ ಕಾರ್ಖಾನೆಗಳು ಸರ್ಕಾರಕ್ಕೆ ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿದ್ದು, ಈ ಕಾರ್ಖಾನೆಗಳಿಂದ ಸರ್ಕಾರಕ್ಕೆ ಬರಬೇಕಾದ ರೂ. 1,66,90,000–00 ಗಳನ್ನು ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ)" ಇದರಡಿ ಬಿಡುಗಡೆಗೊಳಿಸಿ ನಂತರ ವೆಚ್ಚ ಹಾಕಿ ಲೆಕ್ಕ ಶೀರ್ಷಿಕೆ 0040–00–110–1–04 ಗೆ ಜಮಾ ಮಾಡುವುದು. 2009–10 ನೇ ಸಾಲಿನ ಲೆಕ್ಕ ಹೊಂದಾಣಿಕೆಯನ್ನು ಮಹಾಲೇಖಪಾಲರು ಮಾಡುವರು.

ಲೆಕ್ಕ ಶೀರ್ಷಿಕೆ 2852–08–201–0–07 (ಯೋಜನೆ) ಇದರಡಿ ರೂ.75,91,000–00 ಗಳನ್ನು ಜಿಲ್ಲಾಧಿಕಾರಿ, ಮೈಸೂರು ಮತ್ತು ರಾಮನಗರ ರವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರ ವಿಧಿಸಿರುವ ನಿಬಂಧನೆ ಹಾಗೂ ಮಾರ್ಗದರ್ಶನಗಳನ್ವಯ ಪರಿಶೀಲಿಸಿ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು. ವಿತರಿಸಲಾಗಿರುವ ಹಣದ ವಿವರವನ್ನು ಜಿಲ್ಲಾಧಿಕಾರಿಗಳಿಂದ ಕಬ್ಬು ಆಯುಕ್ತರು ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1218 ವೆಚ್ಚ–1/2009, ದಿನಾಂಕ 09–10–09, ಎಫ್‌ಡಿ 1476 ವೆಚ್ಚ–1/2009, ದಿನಾಂಕ 26–10–09 ಮತ್ತು ಆಇ 1783 ವೆಚ್ಚ–1/2009 ದಿನಾಂಕ 30–12–2009 ರಂದು ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದ್ ಕುಮಾರ್,**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.123

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ರೇಷ್ಮೆ ಇಲಾಖೆಯ ಚದಲಪುರ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಸರ್ವೆ ನಂ. 81 ರಲ್ಲಿನ 14 ಎಕರೆ ಜಮೀನಿನಲ್ಲಿ 2 ಎಕರೆ ಜಮೀನನ್ನು ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ರೂಡ್‌ಸೆಟಿ/ಆರ್–ಸೆಟಿಸಂಸ್ಥೆ ಸ್ಥಾಪನೆಗಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**
1. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿರವರ ಅನಧಿಕೃತ ಟಿಪ್ಪಣಿ ಸಂಖ್ಯೆ. ಗ್ರಾಅಪ/130/ಎಸ್‌ಇಪಿ (ಇತರೆ) 09/ಪಿ1, ದಿನಾಂಕ 17–12–2009.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ : ರೇಬೀರೇಕ್ಷೇ/ ಬಿ.ಕೋ/ಚದ/11/09–10, ದಿನಾಂಕ 26–12–2009.

**ಪ್ರಸ್ತಾವನೆ :**

ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಮಾರ್ಗಸೂಚಿ ದಿನಾಂಕ 7–1–2009 ರನ್ವಯ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಗ್ರಾಮೀಣಾ ಸ್ವಯಂ ಉದ್ಯೋಗ ತರಬೇತಿ ಕೇಂದ್ರವನ್ನು (ಆರ್–ಸೆಟಿ) ಲೀಡ್ ಬ್ಯಾಂಕ್‌ಗಳ ಮೂಲಕ ಸ್ಥಾಪಿಸಲು ಸೂಚನೆ ಇದ್ದು, ಈ ಬಗ್ಗೆ ರಾಜ್ಯ ಸರ್ಕಾರವು ನಿವೇಶನ ಅಥವಾ ಜಮೀನನ್ನು ಉಚಿತವಾಗಿ ಒದಗಿಸಬೇಕಾಗಿರುತ್ತದೆ ಮತ್ತು ಕೇಂದ್ರ ಸರ್ಕಾರವು ಕಟ್ಟಡ, ಪೀಠೋಪಕರಣ ಮತ್ತು ಯಂತ್ರೋಪಕರಣಗಳಿಗಾಗಿ ರೂ.1.00 ಕೋಟಿ ಅನುದಾನ ನೀಡುತ್ತದೆ. ಈ ಯೋಜನೆಯು ದಿನಾಂಕ 31–12–2009 ಕ್ಕೆ ಮುಕ್ತಾಯಗೊಳ್ಳುತ್ತಿದ್ದು, ಸದರಿ ಸಮಯದೊಳಗೆ ನಿವೇಶನ ನೀಡದಿದ್ದಲ್ಲಿ ಕೇಂದ್ರ ಸರ್ಕಾರವು ಹಣವನ್ನು ಹಿಂಪಡೆಯುವುದಾಗಿ ತಿಳಿಸಿರುತ್ತದೆ. ಆದ್ದರಿಂದ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ರೂಡ್‌ಸೆಟ್/ಆರ್–ಸೆಟಿ ಸಂಸ್ಥೆ ಸ್ಥಾಪನೆಗೆ ಉಚಿತವಾಗಿ ರೇಷ್ಮೆ ಇಲಾಖೆಯ ನಿವೇಶನವನ್ನು ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ನಿರ್ದೇಶನದಂತೆ 33 ವರ್ಷಗಳ ಅವಧಿಗೆ ಗುತ್ತಿಗೆ ಮೇಲೆ ನೀಡುವಂತೆ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅನಧಿಕೃತ ಟಿಪ್ಪಣಿಯಲ್ಲಿ ಈ ಇಲಾಖೆಯನ್ನು ಕೋರಿರುತ್ತಾರೆ.

ಚದಲಪುರ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಸರ್ವೆ ನಂ.81 ರಲ್ಲಿರುವ 14 ಎಕರೆ ಜಮೀನಿನಲ್ಲಿ 2 ಎಕರೆ ಜಮೀನನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಉದ್ಯೋಗ ಮತ್ತು ವೃತ್ತಿ ಕೌಶಲ್ಯಗಳ ಅಭ್ಯರ್ಥಿಗಳಿಗೆ ತರಬೇತಿ ನೀಡಲು ತರಬೇತಿ ಕೇಂದ್ರವನ್ನು ಸ್ಥಾಪಿಸಲು ಹಸ್ತಾಂತರಿಸುವಂತೆ ಮತ್ತು ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಇವರು ಕೋರಿದ್ದು, ಅವರು ಕೋರಿರುವ 2 ಎಕರೆ ಜಮೀನಿನಲ್ಲಿ ಯಾವುದೇ ಇಲಾಖಾ ಚಟುವಟಿಕೆಗಳು ನಡೆಯದೇ ಇರುವ ಪ್ರಯುಕ್ತ ಅವರ ಕೋರಿಕೆಯಂತೆ ಉದ್ಯೋಗ ಮತ್ತು ವೃತ್ತಿ ಕೌಶಲ್ಯಗಳ ಅಭ್ಯರ್ಥಿಗಳಿಗೆ ತರಬೇತಿ ನೀಡಲು ತರಬೇತಿ ಕೇಂದ್ರವನ್ನು ಸ್ಥಾಪಿಸಲು ಜಮೀನನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಹಸ್ತಾಂತರಿಸಬಹುದೆಂದು ಜಂಟಿ ನಿರ್ದೇಶಕರು, ಬೆಂಗಳೂರು ವಿಭಾಗ ಇವರು ಶಿಫಾರಸು ಮಾಡಿರುವುದರಿಂದ ಅದರಂತೆ ಚದಲಪುರ ಸರ್ಕಾರಿ ಬಿತ್ತನೆ ಕೋಠಿಯ ಸರ್ವೆ ನಂ. 81 ರಲ್ಲಿನ 14 ಎಕರೆ ಜಮೀನಿನ ಪೈಕಿ 2 ಎಕರೆ ಜಮೀನನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಹಸ್ತಾಂತರಿಸಲು ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ಕೇಂದ್ರ ಸರ್ಕಾರದ ಯೋಜನೆಯ ಜಾರಿಗಾಗಿ ತುರ್ತಾಗಿ ಜಮೀನು ನೀಡುವಂತೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಕೋರಿದ್ದು, ಕೋರಿರುವ ಜಮೀನಿನಲ್ಲಿ ರೇಷ್ಮೆ ಇಲಾಖೆಗೆ ಸಂಬಂಧಿಸಿದ ಇಲಾಖಾ ಕಾರ್ಯಚಟುವಟಿಕೆಗಳು ನಡೆಯದೇ ಇರುವ ಪ್ರಯುಕ್ತ ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವಂತೆ 2 ಎಕರೆ ಜಮೀನನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಹಸ್ತಾಂತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 33 ರೇಯೋವಿ 2009, ಬೆಂಗಳೂರು ದಿನಾಂಕ 31ನೇ ಡಿಸೆಂಬರ್ 2009**

ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಮಾರ್ಗಸೂಚಿಯನ್ವಯ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಕೇಂದ್ರವನ್ನು ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಸ್ಥಾಪಿಸುವುದಕ್ಕಾಗಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಶಿಫಾರಸ್ಸು ಮಾಡಿರುವಂತೆ ಚದಲಪುರ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಸರ್ವೆ ನಂ. 81 ರಲ್ಲಿನ 14 ಎಕರೆ ಜಮೀನಿನ ಪೈಕಿ 2 ಎಕರೆ ಜಮೀನನ್ನು 33 ವರ್ಷಗಳ ಅವಧಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಗುತ್ತಿಗೆ ಮೇಲೆ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಭಾರತಿ ಆರ್. ನಾಯಕ್,**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.124

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಮಂಜುನಾಥ, ಮಾಜಿ ಸಿ.ಪಿ.ಸಿ. 460 ಹುಣಸೂರು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಡಿ.ಇ. 12/2007–08 ಓ.ಬಿ:334/2007–08 ದಿನಾಂಕ : 15–02–08.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು/10/2008–09 ಓಬಿ: 13/2008–09 ದಿನಾಂಕ : 21–06–08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 20–09–08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)70/2008–09 ದಿನಾಂಕ : 04–12–2008.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ. 220 ಸಿಎನ್‌ಎಸ್. 08 ದಿನಾಂಕ : 01–12–09.

**ಪ್ರಸ್ತಾವನೆ :**

ಶ್ರೀ ಮಂಜುನಾಥ, ಇವರು ಹುಣಸೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತವಾಗಿ ಗೈರುಹಾಜರಾಗಿ, ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

ಇವರು ಪದೇ ಪದೇ ಅನದಿಕೃತ ಗೈರು ಹಾಜರಿಯಾಗುವ ಹವ್ಯಾಸವುಳ್ಳವರಾಗಿದ್ದು, ಈ ಹಿಂದೆ ಗೈರುಹಾಜರಿಯಾದ ಅವಧಿಗಳನ್ನು ಲಘು ಶಿಕ್ಷೆ ಹಾಗೂ ಕಠಿಣ ಶಿಕ್ಷೆ ವಿಧಿಸುವುದರ ಮೂಲಕ ಇತ್ಯರ್ಥಪಡಿಸಿದ್ದರೂ ಸಹ ಇವರ ಹವ್ಯಾಸದಲ್ಲಿ ಯಾವುದೇ ಸುಧಾರಣೆಯಾಗದೇ ದಿನಾಂಕ 24–05–2007 ರಿಂದ 16–07–2007 ವರೆಗೆ ಅನಧಿಕೃತ ಗೈರುಹಾಜರಿಯಾಗಿರುವುದರ ಮೂಲಕ ಬೇಜವಾಬ್ದಾರಿತನ ನಿರ್ಲಕ್ಷತೆ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 15–02–2008ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದಾರೆ. ದಿನಾಂಕ: 24–05–2007 ರಿಂದ 16–07–2007ರ ವರೆಗೆ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 21–06–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮಾನವೀಯತೆ ನೆಲೆಯಲ್ಲಿ ಒಂದು ಕೊನೆಯ ಅವಕಾಶವಾಗಿ ಪರಿಷ್ಕರಣ ಮೇಲ್ಮನವಿಯ ಭಾಗಶ: ಪುರಸ್ಕರಿಸಲು ಸರ್ಕಾರವು ತೀರ್ಮಾನಿಸಿ ಓದಲಾದ (5)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 308 ಪೊಸಿಅ 2008, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ. ಶ್ರೀ ಮಂಜುನಾಥ, ಮಾಜಿ ಪಿ.ಸಿ. ಹುಣಸೂರು ಗ್ರಾಮಾಂತರ ಪೊಲೀಸ್ ಠಾಣೆ, ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿದ ದಿನಾಂಕ: 15–02–2008ರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಈ ಕೆಳಕಂಡಂತೆ ಆದೇಶಿಸಿದೆ.

(i) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ.

(ii) ಇವರ ವೇತನವನ್ನು ಪಿ.ಸಿ. ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ ಎರಡು ವರ್ಷಗಳ ಅವಧಿಗೆ ಇಳಿಸಲಾಗಿದೆ.

(iii) ಸೇವೆಯಿಂದ ವಜಾಗೊಂಡು ಪುನರ್ ನೇಮಕ ಮಾಡಿ ಕರ್ತವ್ಯಕ್ಕೆ ಹಾಜರಾಗುವವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ (Dies-Non) ಎಂದು ಪರಿಗಣಿಸಲಾಗಿದೆ

(iv) ದಿನಾಂಕ 24–05–2007 ರಿಂದ 16–07–2007ರ ವರೆಗೆ ಗೈರು ಹಾಜರಾದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 110

**(ಟಿ. ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.

(ಪೊಲೀಸ್ ಸೇವೆಗಳು)

## ಶಿಕ್ಷಣ ಸಚಿವಾಲಯ

**ವಿಷಯ :** ಅನುದಾನಿತ ಇಂಜಿನಿಯರಿಂಗ್ ಕಾಲೇಜು ಹಾಗೂ ಪಾಲಿಟೆಕ್ನಿಕ್‌ಗಳಲ್ಲಿ ಅನುಕಂಪದ ನೇಮಕಾತಿ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಇಡಿ 98 ಎಸ್‌ಟಿಬಿ 96, ದಿನಾಂಕ:21–11–1996.

2. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ : ಡಿಟಿಇ 70 ಇಎಸ್‌ಟಿ (4) ಎ 2004. ದಿನಾಂಕ : 02–03–2006/03–04–2006, 09–11–2006, 20–12–2007, 14/24–03–2008 ಹಾಗೂ 12/25–11–2008.

3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 209 ಎಸ್‌ಇಪಿ 2007, ದಿನಾಂಕ: 10–11–2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆಯಲ್ಲಿದ್ದಾಗ ಮೃತರಾದ ನೌಕರರ / ಅಧಿಕಾರಿ / ಬೋಧಕ ಸಿಬ್ಬಂದಿ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡಲು ಕರ್ನಾಟಕ ನಾಗರೀಕ ಸೇವಾ (ಅನುಕಂಪದ ಆಧಾರದ ನೇಮಕಾತಿ) ನಿಯಮಗಳು 1996 ರನ್ವಯ ದಿನಾಂಕ :12–09–1996 ರಂದು ಹೊರಡಿಸಿರುವ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 100 ಎಸ್‌ಸಿಎ 95 ರಲ್ಲಿನ ನಿಯಮಗಳನ್ನು ಎಲ್ಲಾ ಅನುದಾನಿತ ಶಿಕ್ಷಣ ಸಂಸ್ಥೆಗಳಿಗೂ ವಿಸ್ತರಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಪತ್ರಗಳಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆಯಡಿಯಲ್ಲಿನ ಅನುದಾನಿತ ಇಂಜಿನಿಯರಿಂಗ್ ಕಾಲೇಜು ಹಾಗೂ ಪಾಲಿಟೆಕ್ನಿಕ್‌ಗಳಲ್ಲಿ ಕಾರ್ಯನಿರ್ವಹಿಸಿದ ಮೃತ ಸಿಬ್ಬಂದಿಗಳ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೌಕರಿ ನೀಡಲು ಪ್ರಸ್ತಾವನೆಗಳು ಬಂದಿರುತ್ತವೆ. ಸದರಿ ಪ್ರಸ್ತಾವನೆಗಳಿಗೆ ಅನುಮೋದನೆ ನೀಡಲು ಕೋರಿ ಬಂದ ಒತ್ತಡಗಳನ್ನು ಗಮನಿಸಿ ಅನುಕಂಪದ ನೇಮಕಾತಿಗಳು ಮೃತ ನೌಕರನ ಕುಟುಂಬಕ್ಕೆ ಆಸರೆ ಕಲ್ಪಿಸಲು ಸರ್ಕಾರವೇ ಸದುದ್ದೇಶದಿಂದ ನೀಡಿರುವಂತಹ ಆದೇಶವಾಗಿರುತ್ತದೆ. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ 1 ಮತ್ತು 3 ರಲ್ಲಿ ಈ ಸೌಲಭ್ಯಗಳನ್ನು ವಿಸ್ತರಿಸುವಂತೆಯೇ ಅನುದಾನಿತ ಇಂಜಿನಿಯರಿಂಗ್ ಕಾಲೇಜು ಹಾಗೂ ಪಾಲಿಟೆಕ್ನಿಕ್‌ಗಳಲ್ಲಿ ಕಾರ್ಯನಿರ್ವಹಿಸಿದ್ದ ಮೃತ ಸಿಬ್ಬಂದಿಗಳ ಅವಲಂಬಿತರಿಗೂ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡುವ ಸೌಲಭ್ಯವನ್ನು ವಿಸ್ತರಿಸುವಂತೆ ಕೋರಿರುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 102 ಟಿಇಸಿ 2006, ಬೆಂಗಳೂರು, ದಿನಾಂಕ: 05ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ತಾಂತ್ರಿಕ ಶಿಕ್ಷಣ ಇಲಾಖೆಯಡಿಯಲ್ಲಿ ಬರುವ ಅನುದಾನಿತ ಇಂಜಿನಿಯರಿಂಗ್ ಕಾಲೇಜು ಹಾಗೂ ಪಾಲಿಟೆಕ್ನಿಕ್‌ಗಳಲ್ಲಿ ನೇಮಕಾತಿ ಅನುಮೋದನೆಗೊಂಡು ಅನುದಾನಿತ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದಂತಹ ವ್ಯಕ್ತಿಗಳು ಮೃತರಾದಂತಹ ನೌಕರರ / ಅಧಿಕಾರಿ / ಬೋಧಕರ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡಲು ಕರ್ನಾಟಕ ನಾಗರೀಕ ಸೇವಾ (ಅನುಕಂಪದ ಆಧಾರದ ನೇಮಕಾತಿ) ನಿಯಮಗಳು 1996 ರನ್ವಯ ದಿನಾಂಕ : 12–09–96 ರಂದು ಹೊರಡಿಸಿರುವ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 100 ಎಸ್‌ಸಿಎ 95 ರಲ್ಲಿನ ನಿಯಮಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವ ಹಾಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ವಿಸ್ತರಿಸಲಾಗಿದೆ.

1. ಪ್ರತಿಯೊಬ್ಬ ಅರ್ಜಿದಾರರ ಪ್ರಕರಣದಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ಅನುಕಂಪದ ಆಧಾರದ ಮೇಲೆ ನೇಮಕಾತಿ) ನಿಯಮಗಳು, 1996ರ ಸದರಿ ನಿಯಮಗಳ ಪ್ರಕಾರ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪೂರೈಸಿರತಕ್ಕದ್ದು.
2. ಅರ್ಜಿದಾರರು ಅರ್ಜಿ ನೀಡಿದ ದಿನಾಂಕದಂದು ವಯೋಮಿತಿ ಒಳಗಡೆ ಇರತಕ್ಕದ್ದು ಎಂಬುದನ್ನು ಪರಿಶೀಲಿಸಿ, ಖಚಿತಪಡಿಸಿಕೊಂಡು ಸೂಕ್ತ ಪ್ರಸ್ತಾವನೆಗಳನ್ನು ಅನುಬಂಧದಲ್ಲಿನ ಚೆಕ್ ಲಿಸ್ಟ್‌ನಲ್ಲಿ ಪ್ರತಿಯೊಂದು ಪ್ರಕರಣಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಪಡೆದು ನಿಯಮಾನುಸಾರ ಅರ್ಹ ಪ್ರಕರಣಗಳಲ್ಲಿ ಅನುಕಂಪದ ಆಧಾರದ ನೇಮಕಾತಿಯನ್ನು ಅನುದಾನಸಹಿತ ಅನುಮೋದಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

3. ಈ ಆದೇಶದನ್ವಯ ಮಂಜೂರಾದ ಖಾಲಿ ಹುದ್ದೆಗಳ ಎದುರಿಗೆ ಮಾತ್ರ ಅನುಕಂಪದ ಆಧಾರದ ಮೇರೆಗೆ ನೇಮಕಾತಿ ಮಾಡಬಹುದು. ಆದರೆ ಈ ಉದ್ದೇಶಕ್ಕಾಗಿ ಹೊಸ ಹುದ್ದೆಗಳನ್ನು ಯಾವುದೇ ವೃಂದದಲ್ಲಿ ಸೃಜಿಸುವಂತಿಲ್ಲ.

4. ಸಂಬಂಧಪಟ್ಟ ಅನುದಾನಿತ ಇಂಜಿನಿಯರಿಂಗ್ ಕಾಲೇಜು ಹಾಗೂ ಪಾಲಿಟೆಕ್ನಿಕ್‌ಗಳಲ್ಲಿ ಅನುಕಂಪದ ನೇಮಕಾತಿ ಕುರಿತು ಹುದ್ದೆಗಳು ಖಾಲಿ ಇಲ್ಲದಿದ್ದಲ್ಲಿ ಬೇರೆ ಅನುದಾನಿತ ಇಂಜಿನಿಯರಿಂಗ್ ಕಾಲೇಜು ಹಾಗೂ ಪಾಲಿಟೆಕ್ನಿಕ್‌ಗಳಿನ ಅನುದಾನಸಹಿತ ಮಂಜೂರಾದ ಖಾಲಿ ಹುದ್ದೆಗಳಿಗೆ ಪರಿಗಣಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 111

**(ಬಿ. ಎಸ್. ನಾಗರಾಜ್)**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ).

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಪರಿಷ್ಕೃತ ಚೆಕ್ ಲಿಸ್ಟ್**

| | | |
|---|---|---|
| 1. | ಅರ್ಜಿದಾರರ/ಅರ್ಜಿದಾರಳ ಹೆಸರು ಮತ್ತು ದಿವಂಗತ ನೌಕರರೊಂದಿಗೆ ಇರುವ ಸಂಬಂಧ | |
| 2. | ದಿವಂಗತ ನೌಕರರ/ನೌಕರಳ ಹೆಸರು ಮತ್ತು ಪದನಾಮ ಹಾಗೂ ಕರ್ತವ್ಯ ನಿರ್ವಹಿಸುತ್ತಿದ್ದ ಇಲಾಖೆ/ಶಾಖೆ | |
| 3. | ನೌಕರನು ಮರಣ ಹೊಂದಿದ ದಿನಾಂಕ: ಅಧಿಕೃತ ಧೃಢೀಕರಣ ಪತ್ರ | |
| 4. | ಅನುಕಂಪದ ನೇಮಕಾತಿಗಾಗಿ ಅರ್ಜಿ ಸಲ್ಲಿಸಿದ ದಿನಾಂಕ | |
| 5. | ದಿವಂಗತ ನೌಕರನು/ನೌಕರಳು ನಾಮ ನಿರ್ದೇಶಿತರ ಹೆಸರುಗಳು/ನೀಡಿದ ಸೂಕ್ತ ದಾಖಲೆ | |
| 6. | ಯಾವ ಹುದ್ದೆಗೆ ಅರ್ಜಿ ಸಲ್ಲಿಸಲಾಗಿದೆ ಮತ್ತು ಆ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ | |
| 7. | ಅರ್ಜಿ ಸಲ್ಲಿಸಿದ ದಿನಾಂಕದಂದು ಅರ್ಜಿದಾರರ ವಿದ್ಯಾರ್ಹತೆ | |
| 8. | ದಿವಂಗತ ನೌಕರರ ಜೀವಿತ ಕುಟುಂಬ ಸದಸ್ಯರುಗಳ ವಿವರಗಳು (ಸಂಬಂಧಪಟ್ಟ ತಹಶೀಲ್ದಾರರವರಿಂದ) | |
| 9. | ಅರ್ಜಿ ಸಲ್ಲಿಸಿದ ದಿನಾಂಕದಂದು ಅರ್ಜಿದಾರರ ಕ್ರಮ ಸಂಖ್ಯೆ : 8ರಲ್ಲಿ ನಮೂದಿಸಿದ ಕುಟುಂಬದ ಪ್ರತಿಯೊಬ್ಬ ಸದಸ್ಯರುಗಳ ವಾರ್ಷಿಕ ಆದಾಯವು ಎಲ್ಲಾ ಮೂಲಗಳಿಂದ ಸೇರಿ ಮೊದಲನೇ ದರ್ಜೆ ಸಹಾಯಕ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮತ್ತು ಗರಿಷ್ಠ ವೇತನದ ಸರಾಸರಿಯ ವೇತನಕ್ಕೆ ತುಟ್ಟಿಭತ್ಯೆ, ಬೆಂಗಳೂರಿಗೆ ಅನ್ವಯಿಸುವಂತೆ ಮನೆ ಬಾಡಿಗೆ ಭತ್ಯೆ ನಗರ ಪರಿಹಾರ ಭತ್ಯೆಯು ಸೇರಿ ಬರುವ ಒಟ್ಟು ಉಪಲಬ್ದಿಗಿಂತ ಕಡಿಮೆ ಇದೆಯೇ?<br>(1) ಅಂತಹ ಮಾಸಿಕ ವರಮಾನವನ್ನು ಲೆಕ್ಕ ಹಾಕುವಾಗ, ಕುಟುಂಬ ನಿವೃತ್ತಿ ವೇತನ, ನಿವೃತ್ತಿಯಿಂದ ಪಡೆದ ಒಟ್ಟು ಆರ್ಥಿಕ ಪ್ರಯೋಜನಗಳು ಮತ್ತು ಅದರ ಮೇಲೆ ಪ್ರಾಪ್ತವಾದ ಬಡ್ಡಿಯನ್ನು ಬಿಟ್ಟು ಬಿಡತಕ್ಕದ್ದು.<br>(2) ಮೃತ ಸರ್ಕಾರಿ ನೌಕರನ ಕುಟುಂಬದ ಯಾವೊಬ್ಬ ಸದಸ್ಯನು ಯಾವುದೇ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಸೇವೆಯಲ್ಲಿದ್ದರೆ ಅಥವಾ ಸರ್ಕಾರಿ ಅಥವಾ | |

| | | |
|---|---|---|
| | ಖಾಸಗಿ ವಲಯ ಉದ್ಯಮದಲ್ಲಿ ಅಥವಾ ಖಾಸಗಿ ಸಂಸ್ಥೆಯಲ್ಲಿ ಉದ್ಯೋಗದಲ್ಲಿದ್ದರೆ ಅವನ ನಿಯೋಜಕನಿಂದ ಪಡೆದ ಪ್ರಮಾಣ ಪತ್ರದ ಆಧಾರದ ಮೇಲೆ ಮತ್ತು ಅಂತಹ ಸದಸ್ಯನು ಸ್ವಯಂ ಉದ್ಯೋಗದಲ್ಲಿ ತೊಡಗಿದ್ದರೆ, ತಹಸೀಲ್ದಾರ್ ದರ್ಜೆಗಿಂತ ಕಡಿಮೆಯಲ್ಲದ ಕಂದಾಯ ಅಧಿಕಾರಿಯಿಂದ ಪಡೆದ ವರಮಾನ ಪ್ರಮಾಣ ಪತ್ರದ ಆಧಾರದ ಮೇಲೆ ಲೆಕ್ಕಹಾಕತಕ್ಕದ್ದು.<br>(3) ಮೃತ ಸರ್ಕಾರಿ ನೌಕರನಿಗೆ ಸಂಬಂಧಪಟ್ಟಂತೆ "ಕುಟುಂಬ" ಎಂದರೆ ಅವನೊಂದಿಗೆ ವಾಸಿಸುತ್ತಿದ್ದ ಅವರ ಪತ್ನಿ ಅಥವಾ ಅವಳ ಪತಿ ಮತ್ತು ಅವರ ಮಗ, ಅವಿವಾಹಿತ ಮಗಳು ಮತ್ತು ವಿಧವಾ ಮಗಳು. | |
| 10. | ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡಲು ಅರ್ಜಿದಾರರಿಗೆ ಕುಟುಂಬದ ಇತರೆ ಸದಸ್ಯರು ನೀಡಿರುವ ಅಫಿಡವಿಟ್ ಲಗತ್ತಿಸಿದೆಯೇ ? | |
| 11. | ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ ನಿಯಮಗಳು) ನಿಯಮಾವಳಿಗಳು 1977ರ ಪ್ರಕಾರ ಅರ್ಜಿದಾರರು ನೇಮಕಾತಿ ಹೊಂದುವ ಹುದ್ದೆಗೆ ಅರ್ಜಿ ಸಲ್ಲಿಸಿದ ದಿನಾಂಕದಂದು ತಕ್ಕ ವಯೋಮಿತಿ ಹೊಂದಿರುತ್ತಾರೆಯೇ? ಮೂಲ ದಾಖಲಾತಿ ಲಗತ್ತಿಸಿದೆಯೇ? ಹಾಗೂ ಹುದ್ದೆಗೆ ನಿಗಧಿಪಡಿಸಿದ ವಿದ್ಯಾರ್ಹತೆಯ ದಾಖಲಾತಿಗಳನ್ನು ಲಗತ್ತಿಸಲಾಗಿದೆಯೇ? | |
| 12. | ಅನುಕಂಪದ ಆಧಾರದ ನೇಮಕಾತಿಗೆ ಸರ್ಕಾರದಿಂದ ನಿಗದಿಪಡಿಸಲಾದ ಎಲ್ಲಾ ಷರತ್ತುಗಳನ್ನು ಪೂರೈಸಲಾಗಿದೆಯೇ? | |
| 13. | ಅನುಕಂಪದ ನೇಮಕಾತಿಗೆ ಪ್ರಸ್ತಾಪಿಸಿದ ಹುದ್ದೆ. | |
| 14. | ಶಾಲೆ ಕಾಲೇಜಿನ ಹೆಸರು ಮತ್ತು ವಿಳಾಸ | |
| 15. | ಶಾಲೆ/ಕಾಲೇಜು ನಡೆಸುತ್ತಿರುವ ಸಂಸ್ಥೆಯ ಹೆಸರು/ವಿಳಾಸ | |
| 16. | ಸದರಿ ಹುದ್ದೆಯನ್ನು ಅನುದಾನಕ್ಕೆ ಒಳಪಡಿಸಿದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ (ಪ್ರತಿ ಲಗತ್ತಿಸಿದೆ) | |
| 17. | ಸದರಿ ಹುದ್ದೆಯಲ್ಲಿದ್ದ ಹಿಂದಿನ ಸಿಬ್ಬಂದಿಗೆ ಅನುದಾನ ನೀಡಲಾಗುತ್ತಿತ್ತೆ. | |
| 18. | ಹುದ್ದೆ ಹೇಗೆ ಖಾಲಿ ಆಯಿತು | |
| 19. | ಎಂದಿನಿಂದ ಖಾಲಿ ಇದೆ | |
| 20. | ಇಲಾಖಾ ಮುಖ್ಯಸ್ಥರ ಸ್ಪಷ್ಟ ಶಿಫಾರಸ್ಸು | |
| 21. | ಶಾಖೆಯ ಅಭಿಪ್ರಾಯ | |

**ಬಿ. ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ).
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಆರ್.ಐ.ಡಿ.ಎಫ್–13 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಇಡಿ 248 ಯೋಸಕಾ : 2008 ಬೆಂಗಳೂರು, ದಿನಾಂಕ 30–12–2008 (ಸ್ವೀಮರ/200/(ಯುನಿಕ್)2008 ದಿನಾಂಕ 30–12–2008.

**2.** ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಾಶಿಇ 28 ಯೋಜನೆ 2008–09 ದಿನಾಂಕ 28–10–2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಸರ್ಕಾರದ ಆದೇಶದಲ್ಲಿ ಆರ್.ಐ.ಡಿ.ಎಫ್. 13 ಯೋಜನೆಯಡಿ 2008–09 ನೇ ಸಾಲಿಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡಲು ಅನುದಾನ ಹಂಚಿಕೆ ಮಾಡಿ ಸದರಿ ಕಾಮಗಾರಿಗಳನ್ನು ಕರ್ನಾಟಕ ಗೃಹ ನಿರ್ಮಾಣ ಮಂಡಳಿ, ಬೆಂಗಳೂರು ಇವರಿಗೆ ಕಾರ್ಯಕ್ರಮ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿದೆ

ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಈ ಕೆಳಕಾಣಿಸಿದ 05 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ |
|---|---|---|---|
| 01 | ಕರ್ಜಗಿ, ಗುಲ್ಬರ್ಗಾ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 200.00 | 40.00 |
| 02 | ಕಮಲಾಪುರ, ಗುಲ್ಬರ್ಗಾ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 50.00 | 10.00 |
| 03 | ಕಾಳಗಿ, ಗುಲ್ಬರ್ಗಾ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 100.00 | 20.00 |
| 04 | ಕೆ.ಕೆ. ಕೊಪ್ಪ, ಬೆಳಗಾವಿ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 100.00 | 20.00 |
| 05 | ಕಿತ್ತೂರು, ಬೆಳಗಾವಿ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 200.00 | 40.00 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 268 ಯೋಯೋಕ 2009, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009.**

ಆರ್.ಐ.ಡಿ.ಎಫ್. 13 ಯೋಜನೆಯಡಿ ಈ ಕೆಳಕಾಣಿಸಿದ 05 ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ಕಾಮಗಾರಿಗಳಿಗೆ ಅವುಗಳ ಮುಂದೆ ತೋರಿಸಿರುವ ಅಂದಾಜು ಮೊತ್ತಕ್ಕೆ ಕೆಲವು ಷರತ್ತುಗಳನ್ನು ವಿಧಿಸಿ, ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ |
|---|---|---|---|
| 01 | ಕರ್ಜಗಿ, ಗುಲ್ಬರ್ಗಾ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 200.00 | 40.00 |
| 02 | ಕಮಲಾಪುರ, ಗುಲ್ಬರ್ಗಾ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 50.00 | 10.00 |
| 03 | ಕಾಳಗಿ, ಗುಲ್ಬರ್ಗಾ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 100.00 | 20.00 |
| 04 | ಕೆ.ಕೆ. ಕೊಪ್ಪ, ಬೆಳಗಾವಿ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 100.00 | 20.00 |
| 05 | ಕಿತ್ತೂರು, ಬೆಳಗಾವಿ ಜಿಲ್ಲೆ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 200.00 | 40.00 |

**ಷರತ್ತುಗಳು :**

- ಸದರಿ ಕಾಮಗಾರಿಯನ್ನು ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸಲು ಸೂಚಿಸಿದೆ. ನಬಾರ್ಡ್ ಕಾಮಗಾರಿಗಳಿಗೆ ನಕ್ಷೆ ಬದಲಾಯಿಸಬೇಕಾದಲ್ಲಿ ನಬಾರ್ಡ್ ನಿಗದಿಪಡಿಸಿದ ಅಂದಾಜಿನಲ್ಲಿಯೇ ಸಲ್ಲಿಸಿ ನಬಾರ್ಡ್ ಅನುಮತಿ ಪಡೆಯತಕ್ಕದ್ದು.
- ಸದರಿ ಕಾಮಗಾರಿಗೆ 2008-09ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸಿಕೊಂಡು ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮವಹಿಸುವಂತೆ ಸೂಚಿಸುವುದು.
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸಂಬಂಧಿಸಿದ ಕಾಲೇಜುಗಳ ಪ್ರಾಂಶುಪಾಲರಿಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.
- ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾಮಗಾರಿಯನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ನಮೂದಿಸತಕ್ಕದ್ದು.
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಶಿಇ 2830 ಐಎಫ್. (ಬಿ ಮತ್ತು ಎ) 2009 ದಿನಾಂಕ 21-11-2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 112

**(ಐ.ಎಫ್. ಮಾಗಿ)**

ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಆರ್.ಐ.ಡಿ.ಎಫ್-13 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಇಡಿ 172 ಯೋಸಕಾ : 2008 ಬೆಂಗಳೂರು, ದಿನಾಂಕ 30-12-2008 (ಸ್ವೀಮರ/141/(ಯುನಿಕ್)2008 ದಿನಾಂಕ 31-10-2007.
2. ಸರ್ಕಾರದ ಆದೇಶ ಸಂಖ್ಯೆ : ಇಡಿ 172 ಯೋಸಕಾ : 2008 ಬೆಂಗಳೂರು, ದಿನಾಂಕ 09-01-2009 (ಸ್ವೀಮರ ಇಡಿ/4/(ಯುನಿಕ್)2008 ದಿನಾಂಕ 09-01-2009.
3. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಾಶಿಇ 32 ಯೋಜನೆ 2008-09 ದಿನಾಂಕ 27-07-2009.

**ಪ್ರಸ್ತಾವನೆ :**

ಮೇಲೆ (1) ಮತ್ತು (2)ರಲ್ಲಿ ಸರ್ಕಾರದ ಆದೇಶದಲ್ಲಿ ಆರ್.ಐ.ಡಿ.ಎಫ್. 13 ಯೋಜನೆಯಡಿ 2008-09 ನೇ ಸಾಲಿಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡಲು ಅನುದಾನ ಹಂಚಿಕೆ ಮಾಡಿ ಸದರಿ ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆ, ಬೆಂಗಳೂರು ಮತ್ತು ಧಾರವಾಡ ಇವರಿಗೆ ಕಾರ್ಯಕ್ರಮ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿದೆ.

ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಈ ಕೆಳಕಾಣಿಸಿದ 03 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ |
|---|---|---|---|
| 01 | ಪರಶುರಾಂಪುರ, ಮೊದಲನೇ ಮಹಡಿ ಉಳಿದ ಕಾಮಗಾರಿ ಎರಡನೇ ಮಹಡಿಯ ಭಾಗಶಃ ಕಾಮಗಾರಿ | 25.00 | 6.25 |
| 02 | ಗುಡಗೇರಿ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 25.00 | 6.25 |
| 03 | ಅಳ್ನಾವರ, ಕಟ್ಟಡ ನಿರ್ಮಾಣ ಕಾಮಗಾರಿ | 25.00 | 6.25 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 268 ಯೋಯೋಕ 2009, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009.**

ಆರ್.ಐ.ಡಿ.ಎಫ್. 13 ಯೋಜನೆಯಡಿ ಈ ಕೆಳಕಾಣಿಸಿದ 03 ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ಕಾಮಗಾರಿಗಳಿಗೆ ಅವುಗಳ ಮುಂದೆ ತೋರಿಸಿರುವ ಅಂದಾಜು ಮೊತ್ತಕ್ಕೆ ಕೆಲವು ಷರತ್ತುಗಳನ್ನು ವಿಧಿಸಿ, ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ |
|---|---|---|---|
| 01 | ಪರಶುರಾಂಪುರ, ಮೊದಲನೇ ಮಹಡಿ ಉಳಿದ ಕಾಮಗಾರಿ ಎರಡನೇ ಮಹಡಿಯ ಭಾಗಶಃ ಕಾಮಗಾರಿ | 25.00 | 6.25 |
| 02 | ಗುಡಗೇರಿ, ಸ.ಪ್ರ.ದ.ಕಾ. ಕಟ್ಟಡ ನಿರ್ಮಾಣ | 25.00 | 6.25 |
| 03 | ಅಳ್ನಾವರ, ಕಟ್ಟಡ ನಿರ್ಮಾಣ ಕಾಮಗಾರಿ | 25.00 | 6.25 |

**ಷರತ್ತುಗಳು :**

- ಸದರಿ ಕಾಮಗಾರಿಯನ್ನು ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸಲು ಸೂಚಿಸಿದೆ. ನಬಾರ್ಡ್ ಕಾಮಗಾರಿಗಳಿಗೆ ನಕ್ಷೆ ಬದಲಾಯಿಸಬೇಕಾದಲ್ಲಿ ನಬಾರ್ಡ್ ನಿಗದಿಪಡಿಸಿದ ಅಂದಾಜಿನಲ್ಲಿಯೇ ಸಲ್ಲಿಸಿ ನಬಾರ್ಡ್ ಅನುಮತಿ ಪಡೆಯತಕ್ಕದ್ದು.
- ಸದರಿ ಕಾಮಗಾರಿಗೆ 2008–09ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸಿಕೊಂಡು ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮವಹಿಸುವಂತೆ ಸೂಚಿಸುವುದು.
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸಂಬಂಧಿಸಿದ ಕಾಲೇಜುಗಳ ಪ್ರಾಂಶುಪಾಲರಿಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.
- ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾಮಗಾರಿಯನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ನಮೂದಿಸತಕ್ಕದ್ದು.
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಶಿಇ 2830 ಐಎಫ್. (ಬಿ ಮತ್ತು ಎ) 2009 ದಿನಾಂಕ 21–11–2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 113

**(ಐ.ಎಫ್. ಮಾಗಿ)**

ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ (ಯೋಜನೆ)